# ಪಾರ್ತಿಸುಬ್ಬ – ಬದುಕು ಬರಹ

**(ಕಣ್ಣೂರು ವಿಶ್ವವಿದ್ಯಾಲಯದ ಸಹಯೋಗದಲ್ಲಿ ಕರ್ನಾಟಕ ಯಕ್ಷಗಾನ ಅಕಾಡೆಮಿಯು ನಡೆಸಿದ ವಿಚಾರಗೋಷ್ಠಿಗಳಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನ)**

ಪ್ರಕಾಶಕರು

**ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು**

**PARTHISUBBHA** : **BADUKU BARAHA** – (Collection of SAS) edited by **Prof. M.A.Hegade,** Published by Karnataka Yakshagana Academy, Kannada Bhavana, J C Road, Bengaluru. 560002.



ಮುದ್ರಿತ ವರ್ಷ : ೨೦೨೦
ಪ್ರತಿಗಳು : ೩೦೦
ಪುಟಗಳು : VI+142
ಬೆಲೆ : ರೂ. ೭೫/–

**ಪ್ರಕಾಶಕರು:**
ಎಸ್.ಹೆಚ್. ಶಿವರುದ್ರಪ್ಪ
ರಿಜಿಸ್ಟ್ರಾರ್, ಕರ್ನಾಟಕ ಯಕ್ಷಗಾನ ಅಕಾಡೆಮಿ
ಬೆಂಗಳೂರು

ಮುದ್ರಕರು :
**ಎಂ.ಎಸ್. ಗ್ರಾಫಿಕ್ಸ್**
ನಂ. 4/1, 2ನೇ ಮುಖ್ಯರಸ್ತೆ, ಕಾವೇರಿಪುರ, ಕಾಮಾಕ್ಷಿಪಾಳ್ಯ
ಬೆಂಗಳೂರು–560 079 ಮೊ. 9886355728

# ಅಧ್ಯಕ್ಷರ ಮಾತು

ಯಕ್ಷಗಾನ ವಾಲ್ಮೀಕಿಯೆಂದು ಪ್ರಸಿದ್ಧನಾದ ಪಾರ್ತಿಸುಬ್ಬ ಕನ್ನಡದ ಮಹಾಕವಿಗಳಲ್ಲೊಬ್ಬ. ವರ್ಣನಾಕೌಶಲ್ಯ, ಪಾತ್ರಚಿತ್ರಣ, ವಸ್ತುವಿನ್ಯಾಸ, ಸಾಹಿತ್ಯಸೌಂದರ್ಯ, ರಸವೈವಿಧ್ಯ ಸ್ವೋಪಜ್ಞತೆ ಮತ್ತು ಜೀವನದರ್ಶನಗಳು ಅವನನ್ನು ಮಹಾಕವಿಯ ಸ್ಥಾನದಲ್ಲಿ ಪರಿಗಣಿಸುವಂತೆ ಮಾಡುತ್ತವೆ. ಆದರೆ ಶಿಷ್ಟ ಸಾಹಿತ್ಯವು ಯಕ್ಷಗಾನವನ್ನು ಸಾಹಿತ್ಯ ಚರಿತ್ರೆಯಿಂದ ಹೊರಗಟ್ಟಿರುವುದರಿಂದ ಅವನಿಗೆ ಸಲ್ಲಬೇಕಾದ ಗೌರವವು ಸಲ್ಲುತ್ತಿಲ್ಲ. ಅದರಿಂದ ಯಕ್ಷಗಾನಕ್ಕೆ ನಷ್ಟವಿಲ್ಲ. ಕನ್ನಡ ಸಾಹಿತ್ಯಕ್ಕೆ ನಷ್ಟ. ಅತ್ಯಂತ ವಿಶಿಷ್ಟವಾದ ಸಾಹಿತ್ಯ ಪ್ರಕಾರವೊಂದನ್ನು ತನ್ನದೆಂದು ಹೇಳಿಕೊಳ್ಳುವ ಹೆಮ್ಮೆ ಇಲ್ಲವಾಯಿತಷ್ಟೆ!

ಪಾರ್ತಿಸುಬ್ಬನ ಬಗೆಗೆ ಈಗಾಗಲೇ ಹಲವು ಗ್ರಂಥಗಳು, ಅಧ್ಯಯನಗಳು ಬಂದಿವೆ. ಕೆಲವು ಸಮಸ್ಯೆಗಳು ಹಾಗೇ ಉಳಿದಿವೆ. ಮುಖ್ಯವಾಗಿ ಅವನ ಕಾಲದ ಬಗ್ಗೆ ಖಚಿತವಾಗಿ ಹೇಳಲಾಗುತ್ತಿಲ್ಲ. ಅವನು ಪ್ರಾಚೀನನೆಂಬುದು ಸ್ಪಷ್ಟ, ಕೇವಲ ತೆಂಕು, ಬಡಗುಗಳಲ್ಲಿ ಮಾತ್ರವಲ್ಲ, ಮೂಡಲಪಾಯ, ಘಟ್ಟದಕೋರೆಗಳಲ್ಲೂ ಅವನ ಕೃತಿಗಳು ಪಸರಿಸಿವೆ. ಈ ಎಲ್ಲ ಕಡೆಗಳಲ್ಲಿ ಪ್ರಚಲಿತವಿರುವುದೆಂದರೆ ಅವು ಸಾಕಷ್ಟು ಪ್ರಾಚೀನವೇ ಆಗಿರಬೇಕು. ಈ ಭಾಗ್ಯ ಮುಂದಿನ ಪ್ರಸಂಗಗಳಿಗೆ ದಕ್ಕಿಲ್ಲ.

ತೆಂಕುತಿಟ್ಟಿನ ಮೂಲಪುರುಷನಾದ ಸುಬ್ಬ ಮತ್ತು ರಾಮಾಯಣ ಪ್ರಸಂಗಗಳ ಕರ್ತನಾದ ಸುಬ್ಬ ಬೇರೆ ಬೇರೆಯಾಗಿರಬೇಕೆಂಬ ಅನುಮಾನ ನನಗೆ. ತೆಂಕು–ಬಡಗುಗಳ ವಿಭಾಗ ಅಷ್ಟೊಂದು ಪ್ರಾಚೀನವಾಗಿರಲಾರದು. 18ನೆಯ ಶತಮಾನದ ನಂತರದ್ದೆಂದು ಕಾಣುತ್ತದೆ. ಸಭಾಲಕ್ಷಣವನ್ನು ರಚಿಸಿದವನು ರಾಮಾಯಣ ಪ್ರಸಂಗಕರ್ತನಿಂದ ಬೇರೆಯಾಗಿರಬೇಕು.

ಅದೇನೇ ಇದ್ದರೂ ಅವನ ಸಾಹಿತ್ಯದ ಅಧ್ಯಯನವು ಇನ್ನಷ್ಟು ವ್ಯಾಪಕವಾಗಿ ನಡೆಯಬೇಕು. ಕಾಲಕಾಲಕ್ಕೆ ವಿಮರ್ಶೆ ಮರುವಿಮರ್ಶೆಗಳು ನಡೆಯುತ್ತಿರಬೇಕು. ಪ್ರದರ್ಶನಗಳ ಕುರಿತಾಗಿ ಅಧ್ಯಯನ ನಡೆಸಬೇಕಿದೆ. ಒಂದೊಂದೇ ಪ್ರಸಂಗವನ್ನೂ ವಿವರವಾಗಿ ಅಧ್ಯಯನಕ್ಕೊಳಪಡಿಸಬೇಕು. ಡಾ. ಎಂ. ಪ್ರಭಾಕರ ಜೋಶಿಯವರು ಕೃಷ್ಣಸಂಧಾನದ ಕುರಿತು ಸಂಪ್ರಬಂಧವನ್ನು ರಚಿಸಿದಂತೆ, ಸುಬ್ಬನ ಪ್ರಸಂಗಗಳ ಕುರಿತು ಅನೇಕ ಗ್ರಂಥಗಳು ರಚಿತವಾಗಲು ಅವಕಾಶವಿದೆ.

ಪ್ರಸ್ತುತ ಪ್ರಬಂಧ ಸಂಕಲನವು ಕರ್ನಾಟಕ ಯಕ್ಷಗಾನ ಅಕಾಡೆಮಿಯು ಕಣ್ಣೂರು ವಿಶ್ವವಿದ್ಯಾಲಯದ ಕೇಂದ್ರ, ಕಾಸರಗೋಡು ಇವರ ಸಹಯೋಗದಲ್ಲಿ 2020ರ ಫೆಬ್ರವರಿಯಲ್ಲಿ ನಡೆಸಿದ ವಿಚಾರಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನವಾಗಿದೆ. ಜೊತೆಗೆ ದಿಕ್ಸೂಚಿ ಭಾಷಣ ಹಾಗೂ ಗೋಷ್ಠಿಯ ಅಧ್ಯಕ್ಷರ ಭಾಷಣಗಳೂ ಸೇರಿವೆ. ಈ ವರೆಗೆ ಪಾರ್ತಿಸುಬ್ಬನ ಕುರಿತಾಗಿ ನಡೆದ ಚಿಂತನೆಗಳ ಸಂಗ್ರಹ ಹಾಗೂ ಮುಂದೆ ನಡೆಸಬಹುದಾದ ಅಧ್ಯಯನಗಳಿಗೆ ಪ್ರೇರಣೆ ದೊರೆಯುವುದೆಂಬ ಆಶಯ ಈ ಕೃತಿಯದು.

ವಿಚಾರಗೋಷ್ಠಿಯನ್ನು ಯಶಸ್ವಿಯಾಗಿಸಿದ ಎಲ್ಲ ವಿದ್ವಾಂಸರು ಮತ್ತು ಕಣ್ಣೂರು ವಿಶ್ವವಿದ್ಯಾಲಯ ಕಾಸರಗೋಡು ಕೇಂದ್ರದ ನಿರ್ದೇಶಕರು ಹಾಗೂ ಸಿಬ್ಬಂದಿಗಳ ಸಹಕಾರವು ಸ್ಮರಣೀಯ. ಅಲ್ಲದೆ ಇದನ್ನು ಹೊರತರುವಲ್ಲಿ ವಿಶೇಷ ಪರಿಶ್ರಮವನ್ನು ವಹಿಸಿದ ಅಕಾಡೆಮಿಯ ಉತ್ಸಾಹಿ ಸದಸ್ಯರಾದ ಶ್ರೀ ಯೋಗೀಶರಾವ್ ಚಿಗುರುಪಾದೆ, ರಿಜಿಸ್ಟ್ರಾರ್ ಆದ ಶ್ರೀ ಎಸ್.ಹೆಚ್. ಶಿವರುದ್ರಪ್ಪ, ಅಕಾಡೆಮಿಯ ಸಿಬ್ಬಂದಿ ವರ್ಗ, ಅಂದವಾಗಿ ಮುದ್ರಿಸಿದ ಎಂ.ಎಸ್. ಗ್ರಾಫಿಕ್ಸ್, ಬೆಂಗಳೂರು ಮುಂತಾದವರೆಲ್ಲರಿಗೂ ಅಭಿನಂದನೆಗಳು.

**ಯಕ್ಷಗಾನಂ ಗೆಲ್ಗೆ!**

**– ಎಂ.ಎ. ಹೆಗಡೆ**
ಅಧ್ಯಕ್ಷರು

# ಪರಿವಿಡಿ

# ಪಾರ್ತಿಸುಬ್ಬ ಪುನಸ್ಸಂಧಾನ

## (ದಿಕ್ಸೂಚಿ ಭಾಷಣ)

**– ಡಾ. ಎಂ. ಪ್ರಭಾಕರ ಜೋಶಿ**

[ಕರ್ನಾಟಕ ಯಕ್ಷಗಾನ ಅಕಾಡೆಮಿ ಮತ್ತು ಕಣ್ಣೂರು ವಿಶ್ವವಿದ್ಯಾಲಯ ಕೇಂದ್ರ ಕಾಸರಗೋಡು ಇವರು ಫೆಬ್ರವರಿ ೧೩, ೧೪ ೨೦೨೦ರಂದು ಸಂಘಟಿಸಿದ, ಪಾರ್ತಿಸುಬ್ಬನ ಕುರಿತಾದ ದ್ವಿದಿನ ವಿಚಾರಗೋಷ್ಠಿಯ ದಿಕ್ಸೂಚಿ ಭಾಷಣದ ಲೇಖನರೂಪ. ಪರಿಷ್ಕೃತ]

***

**ಧಾತ್ರೀಗುತ್ತಮ ಕಣ್ವನಾಮಪುರದೀ ನಿಂತಿರ್ದ ಶ್ರೀಕೃಷ್ಣನಾ**
**ತತ್ಪಾದಾಂಬುಜ ದಿವ್ಯನಾಮವರದಿಂದೀ ಪಾರ್ವತೀನಂದನಂ ನಾ**
**ಬತ್ತೀಸಾಕೃತಿ ರಾಗ ತಾಳ ವಿಧದಿಂ ರಾಮಾಯಣಂ ಪೇಳ್ವುದಂ**
**ಭಕ್ತಿ ಧ್ಯಾನದಿ ಕೇಳ್ದು ಪುಣ್ಯ ಕಥೆಯಂ ಸಂತೋಷಮಂ ಮಾಳ್ಪುದು**
**(ಪಾರ್ತಿಸುಬ್ಬ ವಿರಚಿತ ಪ್ರಸಂಗಗಳ ಆರಂಭದಲ್ಲಿ ಬರುವ ವೃತ್ತ)**

ಚಂದ್ರಗಿರಿಯ ಈ ತೀರದಲ್ಲಿ ಮಹಾಕವಿ ಕಲಾಚೇತನ ಪಾರ್ತಿಸುಬ್ಬನ ಕುರಿತಾದ ಗೋಷ್ಠಿಗೆ ದಿಕ್ಸೂಚಿಯಾಗಿ ನಾಲ್ಕು ಮಾತು ಹೇಳುವ ಸಂದರ್ಭ ದೊಡ್ಡ ಗೌರವ. ಅದಕ್ಕಾಗಿ ಎಲ್ಲರಿಗೆ ಆಭಾರಿ.

ಭಾರತದ ವಾಙ್ಮಯ, ಕನ್ನಡ ಸಾಹಿತ್ಯಮತ್ತು ಯಕ್ಷಗಾನಕ್ಷೇತ್ರ – ಈ ಮೂರರಲ್ಲೂ ಹಲವು ಕಾರಣಗಳಿಗಾಗಿ ಓರ್ವ ಅನನ್ಯ ಮುಖ್ಯ ಮಹಾಕವಿಯಾಗಿರುವ ಕುಂಬಳೆ ಕಣಿಪುರ (ಕಣ್ವಪುರ) ಪಾರ್ತಿಸುಬ್ಬನ ಕುರಿತಾದ ಈ ಗೋಷ್ಠಿಯು ಒಂದು ಬಗೆಯ ಮರುಭೇಟಿ, Revisit ಆಗಿದೆ. ಇಂತಹ ಮರುಭೇಟಿಗಳು – ಪುನಸ್ಸಂಧಾನಗಳನ್ನು ವಿಶೇಷತಃ ಪಾಶ್ಚಾತ್ಯ ಅಧ್ಯಯನಕಾರರು ವಿಶಿಷ್ಟವಾಗಿ ಮಾಡುತ್ತಾರೆ. – ೧೯೩೦ರ

ದಶಕದಲ್ಲಿ ದಕ್ಷಿಣ ಭಾರತದಲ್ಲಿ ಅಸಾಧಾರಣ ಸಾಂಸ್ಕೃತಿಕ ಸಂಗ್ರಹ ಸಂಚಾರ ಮಾಡಿದ ಅರ್ನಾಲ್ಡ್ ಬಾಕೆ (ನೆದರ್ಲ್ಯಾಂಡ್ ದೇಶದ ಸಂಸ್ಕೃತಿ ವಿದ್ವಾಂಸ)ಯ ಪ್ರವಾಸವನ್ನೇ ಆಧರಿಸಿ ಅವರ ಮೊಮ್ಮಗ ಜೆಂಕಿನ್ಸ್‌ರವರು ಮಾಡಿದ ಪ್ರವಾಸ, ಸಂಗ್ರಹಗಳು ಇಂತಹ ಒಂದು ಉದಾಹರಣೆ. ಇಂತಹ ಮರು ಭೇಟಿಗಳು, ಅಧ್ಯಯನಕ್ಕೊಳಗಾದ ವಸ್ತುವಿಷಯಗಳು ಆ ಕಾಲಕ್ಕೆ ಹೇಗಿದ್ದುವು, ಈಗ ಹೇಗಿವೆ, ಹಿಂದಿನ ಅಧ್ಯಯನಗಳು ಏನು ಹೇಳುತ್ತವೆ, ಆ ಬಳಿಕ ಆದ ಬೆಳವಣಿಗೆ, ಪರಿಷ್ಕಾರಗಳು ಏನು ಎಂಬುವುಗಳನ್ನು ತಿಳಿಯಲು ಸಹಾಯ ಮಾಡುತ್ತವೆ. ಈ ದೃಷ್ಟಿಯಿಂದ ಸುಬ್ಬನ ಕುರಿತಾಗಿ ಆಗಬೇಕಾದ ಮರು ಅಧ್ಯಯನಗಳು (ಹಿಂದೊಮ್ಮೆ ಮಿತ್ರ ರಂಗಕಲಾವಿದ ಚಿನ್ನಾ ಕಾಸರಗೋಡು ಮತ್ತು ನಾನು ಯೋಜಿಸಿ, ಕಾರಣಾಂತರ ಕ್ರಿಯಾರೂಪಕ್ಕೆ ಬಾರದೆ ಹೋದ ನೆನಪಿದೆ) – ಅತೀ ಅಗತ್ಯ. ಅಷ್ಟೊಂದು ವಸ್ತುವೂ, ಮುಖಗಳೂ ಸುಬ್ಬನ ಬಗೆಗಿನ ವಿಚಾರಕ್ಕೆ ಇವೆ. ಅಂತಹವುಗಳ ಅಧ್ಯಯನಗಳು ಈ ಗೋಷ್ಠಿಯ ಮೂಲಕ ಪ್ರಕಟಿತವಾಗಲೆಂದು ಹಾರೈಸುತ್ತೇನೆ.

**ಸಂಕಥನಕಾರ–ಮಹಾಕವಿ**

ಹೌದು, ಪಾರ್ತಿಸುಬ್ಬನು ಕನ್ನಡದ ಶ್ರೇಷ್ಠ ಕಥನಕಾರ, ಮಹಾಕವಿ. ಒಂದು ಪ್ರಾಚೀನವಸ್ತುವು 'ಮೂಲ' ಆಕರದಲ್ಲಿದ್ದುದು – ಜಾನಪದ, ಶಿಷ್ಟಕಾವ್ಯಗಳಲ್ಲಿ, ಚಿತ್ರ, ಶಿಲ್ಪಗಳಲ್ಲಿ ರಂಗಕಲೆಗಳಲ್ಲಿ, ಗಾದೆ–ಒಗಟು–ವಾಗ್ರೂಢಿಗಳಲ್ಲಿ, ಭಾಷಣ,ಪಾಠ, ರಾಜಕೀಯ, ವಾರ್ತಾಮಾಧ್ಯಮ, ನಾಟಕ, ಚಲಚ್ಚಿತ್ರಗಳಲ್ಲಿ – ಹೀಗೆ – ಬಹುವಿಧವಾಗಿ ಪುನರವತಾರ ತಾಳುತ್ತ ಇರುತ್ತದೆ. ಉದಾ: ರಾಮಾಯಣ–> ತೊರವೆಯಿಂದ ಕುವೆಂಪು ತನಕ – ದೇವಾಲಯಶಿಲ್ಪಗಳಿಂದ ಸುಬ್ಬನ ಕೃತಿಗಳ ತನಕ, ರಾಮತೀರ್ಥದಿಂದ ರಾಮನಗುಳಿವರೆಗೆ, ರಾಮ ಅಡಕೆ(ಕಾಡು ಅಡಿಕೆ)ಯಿಂದ 'ರಾಮ ರಾಮಾ' ಉದ್ಗಾರದ ತನಕ ಸತತ ವಿಸ್ತಾರಪಡೆದು ಸಾಗಿ, ಭಾರತದ, ಕನ್ನಡದ ಅಭಿವ್ಯಕ್ತಿಯ ಒಂದು ಜೀವಸ್ವರವಾಗಿ ನಿಂತಿದೆ. ಹನುಮಂತನ ಬಾಲ, ರಾಮಕಥೆಯ ಕಷ್ಟ (ರಾಮ ಕಹಾನಿ) ಇಲ್ಲದ ಭಾರತೀಯ ಭಾಷೆ ಇಲ್ಲ. ನೇಕಿರಾಮ್, ಭೋಲಾರಾಂ, ಆಯಾರಾಂ, ಗಯಾರಾಂ ಎಲ್ಲರೂ ರಾಮರೇ.

**ಬಹುಮೂಲ ಆಕರ**



ಇಲ್ಲಿ – ಒಂದು ಕೃತಿಯು ಹಲವು ಆಕರಗಳಿಂದ ಸ್ವೀಕರಿಸಿ, ಅದು ಮುಂದೆ ಹಲವುಗಳಿಗೆ ಆಕರವಾಗುತ್ತವೆ. ಜತೆಗೆ ಕಾಲ, ದೇಶಗಳ ಪ್ರಭಾವದಿಂದ ಯುಗಧರ್ಮ ಸಂಸ್ಕಾರಗಳಿಂದ ಬಹುವಾಗುತ್ತದೆ. ಅನೇಕ–ಏಕ–ಅನೇಕ–ಹೀಗೆ ಸಾಗುತ್ತ ಇರುತ್ತದೆ.

ಈ ಬಗೆಯ ಆಕರ–ಸಂಕಥನಗಳ ಬಗೆಗೆ ಇತ್ತೀಚೆಗೆ ಓದಿದ, ಡಾ. ಪುರುಷೋತ್ತಮ ಬಿಳಿಮಲೆ ಅವರ 'ಕನ್ನಡ ಸಂಕಥನಗಳು' ಗ್ರಂಥವು ಸೊಗಸಾದ ಚಿಂತನೆಯನ್ನು ಮಂಡಿಸಿದೆ. ಪಂಪನಿಂದ ಶೇಣಿಯವರೆಗೆ, ನಾರಣಪ್ಪನಿಂದ ಕುವೆಂಪು ತನಕ – ಈ ಸಂಕಥನ ವಿಸ್ತರಿಸಿರುವುದನ್ನು ಅವರು ವಿವರಿಸಿದ್ದಾರೆ. ಈ ದೃಷ್ಟಿಯಿಂದ ನಮ್ಮ ಯಕ್ಷಗಾನ ಕವಿಗಳ ಪರಿಶೀಲನೆ ನಡೆಸಬಹುದು.

ಮಹಾಕವಿ ಅನ್ನುವಾಗ – ಅದರಲ್ಲಿ ಹಲವು ಬಗೆ. ರಂಗೋದ್ದಿಷ್ಟ ಕೃತಿಗಳೂ ಮಹಾಕಾವ್ಯಗಳೇ. (ಕಾದಂಬರಿಯೂ ಆಧುನಿಕ ಯುಗದ ಮಹಾಕಾವ್ಯದ ಒಂದು ಸ್ವರೂಪವೆಂಬ ಮಾತಿದೆ.) ಸುಬ್ಬನ ಪ್ರಸಂಗಗಳು – ಪುತ್ರಕಾಮೇಷ್ಟಿ, ಸೀತಾಕಲ್ಯಾಣ, ಪಟ್ಟಾಭಿಷೇಕ, ಪಂಚವಟಿ, ವಾಲಿ ಸಂಹಾರ, ಉಂಗುರ ಸಂಧಿ (ಚೂಡಾಮಣಿ), ಸೇತು ಬಂಧನ, ಅಂಗದ ಸಂಧಾನ, ಕುಂಭಕರ್ಣಾದಿ ಕಾಳಗ (ಯುದ್ಧ), ಕುಶಲವ, ಐರಾವತ, ಕೃಷ್ಣ ಚರಿತೆ (ಬಾಲಲೀಲೆ) ಮತ್ತು ಅವನು ಸಂಕಲಿಸಿದ ಭಾಗಶಃ ಅವನ ರಚನೆಗಳೂ ಸೇರಿರುವ ಸಭಾಲಕ್ಷಣವೆಂಬ ಯಕ್ಷಗಾನಆಟದ ಪೂರ್ವರಂಗಕ್ಕೆ ಅಗತ್ಯವಿರುವ ಪದ್ಯ, ಗದ್ಯಸಂಕಲನ – ಹೀಗೆ ಹನ್ನೊಂದು ರಚನೆಗಳು.

ಯಕ್ಷಗಾನದ ಪೂರ್ವರೂಪಗಳೆನ್ನಬಹುದಾದ ದಶಾವತಾರ, ಕೇಳಿಕೆ, ಆಟಗಳೆಂಬ ಕಲೆಗಳು ಸು. ೧೨ನೆಯ ಶತಮಾನದಲ್ಲೇ ಇದ್ದವು. ಅವುಗಳಿಗೆ ಆಧಾರವಾದ – ಗೇಯ ಸಾಹಿತ್ಯದ ಪ್ರಬಂಧ(ಈಗ ನಾವು ಹೇಳುವ 'ಪ್ರಸಂಗ'ಸಾಹಿತ್ಯ)ಗಳು ದೊರಕಿಲ್ಲ. ಉಲ್ಲೇಖವಾಗಿ ದೊರೆತಿರುವ, ಕೃತಿ ಲಭ್ಯವಿಲ್ಲದ ಮೊದಲ ಯಕ್ಷಗಾನ ಕೃತಿ – ಪುರಂದರದಾಸರ (೧೫೫೦) ಅನಸೂಯಾ ಚರಿತ್ರೆ. ಹಾಗಾಗಿ – ಸುಬ್ಬನು ಯಕ್ಷಗಾನದ ಪ್ರಮುಖ, ಆರಂಭಿಕ ಕವಿ. First Major Poet ಮತ್ತು ನಾಲ್ಕು ಶತಕಗಳ ಕಾಲ – ನಿರಂತರವಾಗಿ ರಂಗಪ್ರಯೋಗಗಳಲ್ಲೂ ಚರ್ಚೆಗಳಲ್ಲೂ ಕನ್ನಡಿಗರ ಬಾಯಿ, ಬರಹ, ನಾಟ್ಯಗಳಲ್ಲಿ ಉಳಿದು ಬಂದಿರುವ ಕವಿ. ಯೋಗ್ಯತೆ, ಪ್ರಯೋಗಪ್ರಾಚುರ್ಯ ಮತ್ತು ಸಂಬಂಧಿತ ಚರ್ಚೆಗಳೆಲ್ಲದರಲ್ಲಿ ಅವನು ಮಹಾಕವಿ. ಸುಬ್ಬನು ರಾಮಾಯಣ ಪ್ರಸಂಗಗಳನ್ನು 'ಸಂಧಿ'ಗಳಾಗಿ ಕಲ್ಪಿಸಿ ಬರೆದಿದ್ದಾನೆ. ಹಾಗಾಗಿ ಆರಂಭದಿಂದಲೆ ಸಮಗ್ರ ರಾಮಾಯಣವನ್ನು ಬರೆಯುವ ಉದ್ದೇಶ ಅವನಿಗಿತ್ತು ಎಂಬುದು ಸ್ಪಷ್ಟ. ಈ ಲೇಖನದ ಆರಂಭದಲ್ಲಿ ಉದ್ಧರಿಸಿದ ವೃತ್ತವೂ ಅದನ್ನೇ ಹೇಳುತ್ತದೆ.

ಪ್ರಾಚೀನ ಆಕರಗಳನ್ನು ಬಲು ದೊಡ್ಡ ಒಂದು ರಂಗ ಮಹಾಕಾವ್ಯವಾಗಿ, ಸಂಗೀತ ಸಾಹಿತ್ಯಗಳ ಆಳವಾದ ತಿಳಿವಿನಿಂದ ವಾಗ್ಗೇಯಕಾರನಾಗಿ ರಚಿಸಿದ್ದರಿಂದ, ಯಕ್ಷಗಾನಕ್ಕೆ ದೊಡ್ಡ ಮೂಲಾಧಾರವನ್ನು ಒದಗಿಸಿದುದರಿಂದ, ಪದ ಪದ್ಯವಾಗಿ ಸರಳ –ಗಹನ ಆಲಂಕಾರಿಕತೆಗಳಿಂದ ನಾಟಕೀಯತೆ ಮತ್ತು ಉತ್ಕೃಷ್ಟಗೀತಮಾದರಿಗಳ ರಚನೆಯಿಂದ – ಹೀಗೆ ಅವನು ಬಹುವಿಧದಿಂದ ಮಹಾಕವಿ – ಪಂಪ, ಕುಮಾರವ್ಯಾಸ, ಲಕ್ಷ್ಮೀಶ, ರಾಘವಾಂಕರ ಹಾಗೆ.

**ಕಾಲ–ದೇಶ–ಕರ್ತೃತ್ವವಿವಾದ**

'ಸುಬ್ಬನ ಸಮಸ್ಯೆ'ಯು ಕನ್ನಡದ ದೊಡ್ಡ ಸಂಶೋಧನ ವಿವಾದಗಳಲ್ಲೊಂದು. ಈ ವಿವಾದದ ವಿವರಗಳನ್ನು ಒಂದು ಕ್ಷಣ ಬದಿಗಿಟ್ಟು ನೋಡುವುದಾದರೆ – ಇದರಿಂದಾಗಿ, ಯಕ್ಷಗಾನಕ್ಕೆ ಲಾಭವಾಗಿದೆ. ಯಕ್ಷಗಾನ ಕವಿಗೆ ಸಂಶೋಧನೆಯಲ್ಲಿ ದೊರೆತ ಪ್ರಾಶಸ್ತ್ಯ, ಕೃತಿಪರೀಕ್ಷೆ, ಶೈಲಿ ವಿಶ್ಲೇಷಣೆ, ಆಕರ ವಿಚಾರ, ಪದಪ್ರಯೋಗ ಹೀಗೆ ಯಕ್ಷಗಾನ ಸಾಹಿತ್ಯದ ವಿವಿಧ ಅಂಶಗಳಿಗೆ ಮಹತ್ತ್ವ ಬಂದಿತು. ಹೀಗೆ ವಿವಾದದ ಕಾರಣದಿಂದಲೂ ಸುಬ್ಬನು ಉಜ್ಜೀವನಕಥನ ಕೇಂದ್ರವಾದನು.

ಸುಬ್ಬ ಎಲ್ಲಿಯವನೆಂಬ ವಿಚಾರವಾಗಿ ಬಹುವಾದ ತರ್ಕಗಳೂ ಎಳೆದಾಟಗಳೂ ಕಾಣಿಸಿದವಾದರೂ ಆತ ಕುಂಬಳೆಯವನೆಂಬ ವಾದಕ್ಕೇ ಇನ್ನೂ ಬಲ ಇರುವುದು. ಈ ಬಗೆಗೆ ಕುಕ್ಕಿಲ ಕೃಷ್ಣ ಭಟ್ಟರು, ಡಾ. ಅಮೃತ ಸೋಮೇಶ್ವರ ಮತ್ತು ಡಾ. ಎಂ. ಪ್ರಭಾಕರ ಜೋಶಿ ಅವರು ವ್ಯಕ್ತಪಡಿಸಿರುವ ಅಭಿಮತಗಳು ಹೆಚ್ಚು ಭಾರ ಪಡೆದಿವೆ.

"ಒಂದು ರಂಗಪ್ರಸ್ಥಾನ, ದೊಡ್ಡದಾಗಿ ಪರಿಷ್ಕರಣಗೊಳ್ಳುವಾಗ, ಮಾತ್ರ ಕೃತಿಲಕ್ಷಣ ನಿರೂಪಿತವಾದೀತು. ಪಾರ್ತಿಸುಬ್ಬನ ಕೃತಿಯಂತೆ ತನ್ನ ರಚನೆಯ ಲಕ್ಷಣೋಕ್ತಿ ನೀಡಿದ [ಉದಾಹರಣೆಗೆ – 'ಬತ್ತೀಸಾಕೃತಿರಾಗತಾಳವಿಧದಿಂ' ಇತ್ಯಾದಿ] ಸಂದರ್ಭ ಇನ್ನಾವ ಯಕ್ಷಗಾನ ಕವಿಯ ರಚನೆಯಲ್ಲೂ ಕಾಣಿಸಿಕೊಂಡಿಲ್ಲ. ಇದೊಂದೇ ಪಾರ್ತಿಸುಬ್ಬನದು ಈ ಪ್ರಸ್ಥಾನದ ಆದಿಮರಚನೆ ಎನ್ನಲು ಪರ್ಯಾಪ್ತ" ಎಂಬ ಅಭಿಪ್ರಾಯದ ಮಾತುಗಳನ್ನು ಡಾ. ಜೋಶಿ ಹೇಳಿದ್ದು, ಅದೊಂದು ದೊಡ್ಡ ಶೋಧನೆಯಾಗಿ ನಿಲ್ಲುತ್ತದೆ. [ನೋಡಿ : ಉಡುಪಿಯ ಆರ್‌ಆರ್‌ಸಿ ೨೦೦೮ರಲ್ಲಿ ದಾಖಲಿಸಿಕೊಂಡ ಬಲಿಪ ನಾರಾಯಣ ಭಾಗವತರ ಹಾಡುಗಾರಿಕೆಗೆ ನೀಡಿದ ವಿವರಣೆಗೆ ದೃಕ್‌ಶ್ರವಣ ಮುದ್ರಿಕೆ. 'ಮುಂದಲೆ', ಡಾ. ಕೆ. ಎಂ. ರಾಘವ ನಂಬಿಯಾರ್‌ರ ಸಂಕಲನ, ಸಾಹಿತ್ಯಚಂದನ, ಬೆಂಗಳೂರು– ೨೦೦೮]

ಸುಬ್ಬನ ಸಮಸ್ಯೆಗೆ ಹಲವು ಮುಖಗಳಿವೆ. ೧೯೫೦ರ ತನಕ ಪಾರ್ತಿಸುಬ್ಬನ ಸ್ಥಳ, ಕರ್ತೃತ್ವಗಳಲ್ಲಿ ವಿವಾದವಿರಲಿಲ್ಲ. 'ಅವನು ಕುಂಬಳೆಯವನು, ರಾಮಾಯಣ ಪ್ರಸಂಗಗಳ ಕರ್ತೃ' ಎಂಬುದು ಸ್ಥಾಪಿತ ವಿಷಯವಾಗಿತ್ತು. ಅದಾಗಲೇ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಕೃತಿ, ಮುಳಿಯ ತಿಮ್ಮಪ್ಪಯ್ಯನವರ 'ಪಾರ್ತಿಸುಬ್ಬ' ಪ್ರಕಟವಾಗಿತ್ತು (೧೯೪೫). ಇದು ಯಕ್ಷಗಾನ ಕವಿಯೊಬ್ಬನ ಕುರಿತಾಗಿ ಬಂದ ಮೊದಲ ಪುಸ್ತಕ. ಡಾ. ಶಿವರಾಮ ಕಾರಂತರು ಈ ಕುರಿತು ಕೆಲವು ಸಂದೇಹಗಳನ್ನು – ಸುಬ್ಬನ ಕರ್ತೃತ್ವ, ಕಾಲ, ದೇಶಗಳಲ್ಲಿ ಚರ್ಚೆ ಆರಂಭಿಸಿದರು. ಅವರ ವಾದಗಳಿಗೆ ಬಲವಾದ ಪ್ರತಿವಾದವನ್ನು ಮಂಡಿಸಿದವರು ಸಂಶೋಧಕ ಕುಕ್ಕಿಲ ಕೃಷ್ಣ ಭಟ್ಟರು (೧೯೧೧–೧೯೮೮). ಕಾರಂತ–ಕುಕ್ಕಿಲರನ್ನು ಗಣಿಸದೆ ಸುಬ್ಬನ ಕುರಿತಾದ ವಿವೇಚನೆ ನಡೆಸುವಂತಿಲ್ಲ. ಈ ಚರ್ಚೆಯು ೧೯೫೦–೧೯೭೦ ಅವಧಿಯಲ್ಲಿ ತುರುಸಿನಿಂದ ನಡೆದು, ಇತ್ತಿಚಿನವರೆಗೂ ಮುಂದುವರಿದಿತ್ತು.

ಈ ಚರ್ಚೆಯಲ್ಲಿ ಕಾರಂತ, ಕುಕ್ಕಿಲ. ಮಂಜೇಶ್ವರ ಗೋವಿಂದ ಪೈ, ಕಯ್ಯಾರ ಕಿಞ್ಞಣ್ಣ ರೈ, ಬೈಕಾಡಿ ವೆಂಕಟಕೃಷ್ಣ ರಾವ್, ಪ್ರೊ. ಅಮೃತ ಸೋಮೇಶ್ವರ, ರಾಮಚಂದ್ರ ಉಚ್ಚಿಲ. ನೀರ್ಪಾಜೆ ಭೀಮ ಭಟ್ಟ, ಸಿರಿಬಾಗಿಲು ವೆಂಕಪ್ಪಯ್ಯ, ವೆಂಕಟರಾಜ ಪುಣಿಂಚತ್ತಾಯ, ಕೆ. ಪಿ. ವೆಂಕಪ್ಪ ಶೆಟ್ಟಿ ಮತ್ತು ಈ ಲೇಖಕನ ಸಹಿತ ಹಲವರು ಭಾಗವಹಿಸಿದ್ದಾರೆ. ಈ ಚರ್ಚೆಯ ವಿವಿಧ ಹಂತಗಳು, ಪರಿಷ್ಕಾರಗಳು, ವಿವರಗಳು – ಕಾರಂತರ ಯಕ್ಷಗಾನ ಬಯಲಾಟ (೧೯೫೭, ೧೯೬೩), ಕುಕ್ಕಿಲ ಸಂಪುಟ (ಸಂ. ಪ್ರಭಾಕರ ಜೋಶಿ)) ಮಧುರ ಸ್ಮೃತಿ, ಮಧುಪುರ ಸಂಚಿಕೆ, ನಮ್ಮ ಅಜಪುರ ಸಂಚಿಕೆ ಮತ್ತು ಆ ಕಾಲದ ರಾಷ್ಟ್ರಮತ, ರಾಷ್ಟ್ರಬಂಧು, ನವಯುಗ, ನವಭಾರತ ಸಂಚಿಕೆಗಳಲ್ಲೂ, ಸ್ವತಂತ್ರ ಬರಹಗಳಲ್ಲೂ ಚದರಿದೆ. ಈಯೆಲ್ಲವನ್ನು ಒಂದೆಡೆ ಸೇರಿಸಿ, ಪ್ರಕಟಿಸಿದಲ್ಲಿ ಇಡಿಯ ವಾದಾಂಶಗಳು, ತೀರ್ಮಾನಗಳು ಮತ್ತು ಮರು ಪರಿಶೀಲನೆಗಳನ್ನು ತಿಳಿಯಲು ಅನುಕೂಲ. ಡಾ. ಪಾದೇಕಲ್ಲು ವಿಷ್ಣು ಭಟ್ಟರಂತಹವರ ಮಾರ್ಗದರ್ಶನದಲ್ಲಿ – ಅಂತಹ ಕೆಲಸವಾಗಲೆಂದು ಹಾರೈಸುತ್ತೇನೆ.

ಈ ವಿವಾದದ ಮೂಲ ಇರುವುದು ಉತ್ತರ ಕನ್ನಡದ ಕರ್ಕಿಯಲ್ಲಿ ದೊರೆತ ರಾಮಾಯಣ (ಮತ್ತು ಇತರ) ಪ್ರಸಂಗಗಳ ಓಲೆಪ್ರತಿ(ಕರ್ಕಿ ಪ್ರತಿ ಎಂದು ಪ್ರಸಿದ್ಧ)ಯಲ್ಲಿದ್ದ ಒಂದು ಪಾಠಾಂತರ, ಅಪಪಾಠ.

**ಧಾತ್ರೀಗುತ್ತಮ ಕಣ್ವನಾಮಪುರದೀ ನಿಂತಿರ್ದ ಶ್ರೀಕೃಷ್ಣನಾ ।**
**ತತ್ಪಾದಾಂಬುಜ ದಿವ್ಯನಾಮ ವರದಿಂದೀ ದೇವಕೀನಂದನ...**

ಪ್ರತಿಕಾರನಿಗೆ ಪಾರ್ವತೀನಂದನ (ಪಾರ್ತಿಸುಬ್ಬ) ಎಂಬುದು ಅರ್ಥವಾಗದೆ, ಶ್ರೀಕೃಷ್ಣನು ಪಾರ್ವತೀ ನಂದನ ಹೇಗೆ? ದೇವಕೀನಂದನನಲ್ಲವೆ? ಅನಿಸಿ 'ದೇವಕೀನಂದನ' ಎಂದು ಮಾಡಿದನು. ಆದರೆ, ಎರಡು ಸಾಲುಗಳು ಹೇಗೂ ಅನ್ವಯವೇ ಆಗದಿರುವುದರಿಂದ, ಇದು ಪ್ರತಿಕಾರನ ಪ್ರಮಾದ ಎಂಬುದು ಸ್ಪಷ್ಟ.

ಇದಕ್ಕೆ ಹೊಂದಿಕೆಯಾಗಿ – ಇನ್ನೊಬ್ಬ ಸುಬ್ಬನೆಂಬ ಕವಿ ದೇವಮ್ಮನ ಮಗನಿದ್ದುದರಿಂದ ಅವನೇ ಇವನೆಂದು ಭ್ರಾಂತಿಯೂ ಉಂಟಾಯಿತು. ಅಜಪುರದ ಸುಬ್ಬ, ನಗಿರೆ ಸುಬ್ಬ, ಆಡುವಳ್ಳಿಯ ಸುಬ್ಬ ಅವರ ಮೂಲ/ಕಾಲ/ಶೈಲಿಗಳು ಪ್ರಸ್ತಾವಗೊಂಡುವು, ಸುಬ್ಬ ಶಬ್ದಕ್ಕೆ ಹೊಸ ಪ್ರಾಶಸ್ತ್ಯ ಬಂತು!

ಈ ವಿವಾದದ ವಿವರಗಳಿಗೆ ಹೋಗದೆ, ಚರ್ಚಿತವಾದ ಮುಖ್ಯವಾದ ವಿಷಯಗಳನ್ನು ಸಂಗ್ರಹಿಸುವುದಾದರೆ –

೧. ರಾಮಾಯಣಾದಿ ಪ್ರಸಂಗಗಳ ಕರ್ತೃ ಪಾರ್ತಿಸುಬ್ಬನು ಹೌದೆ? ಅಲ್ಲವಾದರೆ ಯಾರು?
೨. ಕವಿಯ ದೇಶ, ಕಾಲಗಳಾವುವು?
೩. ಅವನ ಜಾತಿ, ವೃತ್ತಿ, ಕಲಾವ್ಯವಸಾಯ ಏನು? ಸುಬ್ಬರು ಎಷ್ಟು ಮಂದಿ?
೪. ಅವನದೆನ್ನಲಾದ ಎಲ್ಲ ಕೃತಿಗಳೂ ಅವನವೇ ಹೌದೆ? ಬೇರೆ ಸುಬ್ಬರವು ಎಷ್ಟು?
೫. ಅವನ ಆಕರಗಳು ಯಾವುವು? ರಾಮನಾಟ್ಟಂ (ಕಥಕ್ಕಳಿ) ಕೃತಿಗಳಿಗೂ ಅವನ ರಾಮಾಯಣಕ್ಕೂ ಇರುವ ಸಂಬಂದವೆಂತಹದು? ಯಾವುದು ಮೊದಲು?

ಈ ವಾದದಲ್ಲಿ ಅಕೆಡೆಮಿಕ್ ಸಂಶೋಧನಾತ್ಮಕ ವಿಷಯಗಳ ಜೊತೆಗೆ, ಆವೇಶ, ನಿಂದಾವಾದ, ನಿರಾಧಾರ ಊಹೆ, ಕೃತಕ ಪುರಾವೆ, ಆರೋಪ ಇವೂ ಬಂದವು. ಪ್ರತಿಗಳ ಕಾಲ (ಎಫಿಮರೀಸ್  ಆಧಾರಿತ ಗುರುತಿಸುವಿಕೆಗಳು) ಗಣನೆಗಳ ತಪ್ಪುಗಳು ಪ್ರಕಟವಾದುವು. ಪಾರ್ತಿಸುಬ್ಬನ ಕಟ್ಟೆ, ಪಾರ್ತಿಬೆಟ್ಟು, ಮಧೂರು, ಮದ್ದೂರು, ಕುಂಬಳೆ, ಕಣಿಪುರ, ಆಗುಂಬೆ ಕಣಿವೆ, ಕಾನೂರು – ಪೇಟ್‌ಪುರಿ ಗಣಪ ಇವೆಲ್ಲ ಉಲ್ಲೇಖಿತವಾದುವು.

'ಸುಬ್ಬ, ಮದವೂರು, ಕಣ್ವಪುರಗಳು ಬೇರೆಡೆಯೂ ಇರಬಹುದು' ಎಂದ ಕಾರಂತರು – ಆ ಪರ್ಯಾಯ ಸ್ಥಳಗಳಲ್ಲಿ ಸುಬ್ಬನ ಕುರಿತಾದ ಜನಶ್ರುತಿಗಳಾಗಲಿ, ವಂಶಚರಿತ್ರೆಯಾಗಲಿ

ಇದ್ದುದನ್ನು ಹೇಳಿಲ್ಲ! ಕುಕ್ಕಿಲರು ತಮ್ಮ ಬರಹಗಳೆಲ್ಲ ಉತ್ತರೋತ್ತರವಾಗಿ ಆದ ಬದಲಾವಣೆಗಳನ್ನು ಮತ್ತು ಇತಿಹಾಸಗಳನ್ನು ಸ್ಪಷ್ಟವಾಗಿ ವಿವರಿಸಿಲ್ಲ. ಇರಲಿ. ಏನಿದ್ದರೂ ಸುಬ್ಬನ ವಿವಾದದ ಗೊಂಡಾರಣ್ಯದ ವಿಹಾರ – ಸಂಶೋಧಕ ಕುತೂಹಲಿಗಳಿಗೆ ಬೋಧಕವಾಗಿದೆ.

ಈಗ ಒಟ್ಟಾರೆಯಾಗಿ, ಉಭಯ ಪಕ್ಷಗಳ ನಿಲುಮೆಗಳು ಹೀಗಿವೆ :

೧. ಸದರಿ ಕವಿ ಅಜ್ಞಾತ, ದೇಶವೂ ಅನಿಶ್ಚಿತ, ಕಣ್ವಪುರದ ಕೃಷ್ಣ ಭಕ್ತ, ಉತ್ತಮ ಕವಿ – ಇದು ಕಾರಂತರ ನಿಲುಮೆ.
೨. ಅವನು ಪಾರ್ತಿಸುಬ್ಬ, ಕುಂಬಳೆಯವನೇ. ಕಾಲ ೧೬೨೦ರ ಹಿಂದು ಮುಂದು. ಇದು ಕುಕ್ಕಿಲರ ನಿಲುಮೆ. ಸುಬ್ಬನ ಐರಾವತದಲ್ಲಿ ಬರುವ ಸಂಕಲ್ಪಮಂತ್ರವು ಅದರಲ್ಲಿ ಬಂದ ಕಾಲದ ಪ್ರಸ್ತಾವವು ೧೬೨೦ಕ್ಕೆ ಹೊಂದುತ್ತದೆ – ಎಂಬುದು.

ಕವಿ ಅಜ್ಞಾತನೆನ್ನುವ ಕಾರಂತರಿಗೂ – ಆ ಕಾಲವು ಸಮ್ಮತವಿದೆ. ತಾನು ಕಂಡ ಸಭಾಲಕ್ಷಣದ ಹಳೆಯ ಪ್ರತಿಯಲ್ಲಿ ಸಭಾಲಕ್ಷಣ (ಪೂರ್ವರಂಗ)ದಲ್ಲಿ ಪಂಚವಟಿ ಪ್ರಸಂಗದ ಸೂಚನೆ ಇರುವುದರಿಂದ, ರಾಮಾಯಣ ಪ್ರಸಂಗಗಳು ಬಹು ಪ್ರಾಚೀನ ಎಂದೂ ಅವರುಹೇಳಿದ್ದಾರೆ, ಸಭಾಲಕ್ಷಣ ಪ್ರದರ್ಶನದಲ್ಲಿ, ನಿತ್ಯವೂ (ಮುಂದಿನ ಆಟ ಪ್ರಸಂಗ ಕಥಾನಕ ಯಾವುದೇ ಇದ್ದರೂ) ಶ್ರೀರಾಮನ ಒಡ್ಡೋಲಗವಾಗುವಪದ್ಧತಿ (ರಂಗಾತಾರ?) ಇದ್ದಿತೆಂದು ಕುಕ್ಕಿಲರು ಹೇಳಿದ್ದು ಇದಕ್ಕೆ ಹೊಂದಿಕೆಯಲ್ಲಿದೆ.

ಸುಬ್ಬನ ಕುರಿತಾದ ವಿಸ್ತೃತ ಅಧ್ಯಯನದ ಪಕ್ವಫಲವಾಗಿ – ಕುಕ್ಕಿಲರು ಗ್ರಂಥಸಂಪಾದನೆಯ ತತ್ವಗಳನ್ನು ಸಂಗೀತ ವಿವರಗಳನ್ನು ಅನುಸರಿಸಿ ಸಂಪಾದಿಸಿದ, ಪಾರ್ತಿಸುಬ್ಬನ ಯಕ್ಷಗಾನಗಳು (ಕ.ಅ.ಸಂ. ಮೈಸೂರು ವಿವಿ. ೧೯೭೫) ಈ ಬಗೆಯ ಪ್ರಥಮ ಕೃತಿ, ದೊಡ್ಡ ಸಾಧನೆ. ಸುಬ್ಬನಿಗೆ ಸಂದ ಅರ್ಹ ಗೌರವ ಇದರಲ್ಲೂ ಸುಬ್ಬನೇ ಪ್ರಥಮ!

**ಆಕರಗಳು**

ಪಾರ್ತಿಸುಬ್ಬನು ವಿದ್ವಾಂಸನೂ, ಭಾಗವತನೂ ಆಗಿದ್ದವನು.ಕಣಿಪುರ (ಕುಂಬಳೆ) ದೇವಳಯಲ್ಲಿ ಪಾಟಾಳಿ ಸೇವಾವೃತ್ತಿಯಲ್ಲಿದ್ದನು, ಕೇರಳದಲ್ಲಿ ವಿದ್ಯಾಭ್ಯಾಸ ಪಡೆದವನೆಂದೂ ಜನಶ್ರುತಿ. ಇದು ಯಥಾರ್ಥವೆಂಬುದು ಅವನ ಕೃತಿಗಳಲ್ಲಿ ಕಾಣುವ ವಿಚಾರ. (ಅವನ ತಮ್ಮನು ಕೇರಳದ ರಾಮನಾಟ್ಟದಲ್ಲಿ ವೇಷಧಾರಿಯಾಗಿದ್ದ ವಿಚಾರವೂ, ಕೆಲವು ಕಡೆ ಪ್ರಸ್ತಾವಿತವಿದೆ.)

ಸುಬ್ಬನ ಪ್ರಸಂಗಗಳಲ್ಲಿ – ರಾಮಾಯಣ ಪ್ರಸಂಗಗಳಿಗೆ – ಕಥಕ್ಕಳಿ (ರಾಮನಾಟ್ಟಂ) ಪ್ರಸಂಗಗಳು ಮತ್ತು ತೊರವೆ ರಾಮಾಯಣ, 'ಕುಶಲವ'ಕ್ಕೆ ಲಕ್ಷ್ಮೀಶ – ಜೈಮಿನಿ ಭಾರತ, 'ಐರಾವತ'ಕ್ಕೆ ಕುಮಾರವ್ಯಾಸನ (?), ಐರಾವತ ಖಂಡ ಕಾವ್ಯ ಇವು ಮುಖ್ಯ ಆಕರಗಳು. ಜತೆಗೆ ಬೇರೆ ಅಂಶಗಳೂ, ಸ್ವಂತ ಕಲ್ಪನೆಗಳೂ ಇವೆ.

ಸಭಾಲಕ್ಷಣವೆಂಬ ಆತನ ಸಂಕಲನದಲ್ಲಿ ನಾಟ್ಯ ಸಂಬಂಧಿಯಾದ ನಾರದಶಿಕ್ಷಾ ಮೊದಲಾದ ಗ್ರಂಥಗಳಿಂದ ಉಲ್ಲೇಖಗಳೂ, ಆತನದಾದ ರಚನೆಗಳೂ, ಪಾರಂಪರಿಕ ಹಾಸ್ಯ ಮೊದಲಾದುವೂ, ಮಲೆಯಾಳಿ ತಮಿಳು ಪದ್ಯಗಳೂ ಇವೆ. ಲೀಲಾಶುಕ ಕವಿಯ (ಈತನು ಕುಂಬಳೆ ಪ್ರದೇಶದ ಮೂಲದವನೆಂದು ವಿ। ವೆಂಕಟರಾಜ ಪುಣಿಂಚತ್ತಾಯರು ತೋರಿಸಿಕೊಟ್ಟಿದ್ದಾರೆ. ಈತನ ಕೃಷ್ಣಲೀಲಾ ತರಂಗಿಣಿಯಶ್ಲೋಕಗಳು ಕುಂಬಳೆ ದೇವಾಲಯದಲ್ಲಿ ಹಾಡಲ್ಪಡುತ್ತಿದ್ದವಂತೆ) ಶ್ಲೋಕಗಳೂ ಇವೆ.

ಈ ಕಾರಣಗಳಿಂದೆಲ್ಲ – ಸುಬ್ಬನು ತೊರವೆ, ಲೀಲಾಶುಕ, ಲಕ್ಷ್ಮೀಶರ ಬಳಿಕವೂ ಕಥಕಳಿ ರಾಮಾಯಣ ಕವಿ ಕೊಟ್ಟಾರಕ ಮಹಾರಾಜನ ನಿಕಟವಾಗಿಯೂ ಇದ್ದವನೆಂಬುದು ಸ್ಪಷ್ಟ.

**ಕಥಕಳಿ ಮತ್ತು ಪಾರ್ತಿಸುಬ್ಬ**

ಸುಬ್ಬನ ರಾಮಾಯಣ ಸಂಧಿಗಳಲ್ಲಿ – ಅಂದರೆ ಪ್ರಸಂಗಗಳಲ್ಲಿ – ರಾಮನಾಟ್ಟಂನ ಆಟ್ಟಕಥೆಗಳ್ ಕೃತಿಗಳ ನೇರ ಪ್ರಭಾವ ಸ್ಪಷ್ಟ. ಇದನ್ನು ವಿ। ಕುಕ್ಕಿಲರು ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ (ಪಾರ್ತಿಸುಬ್ಬನ ಯಕ್ಷಗಾನಗಳು, ಮೈಸೂರು ವಿವಿ., ೧೯೭೫). ರಾಮಾಯಣದ ಕತೆಯು ಮುಂದೆ ಸಾಗಿದಂತೆ, ಈ ಪ್ರಭಾವ, ನೇರ ಅನುವಾದಗಳು ಕಡಮೆ. ಪುತ್ರಕಾಮೇಷ್ಟಿ, ಪಟ್ಟಾಭಿಷೇಕ, ಪಂಚವಟಿಗಳಲ್ಲಿ ಹೆಚ್ಚು.

ಈ ಸಂಬಂಧವಾಗಿ ಪರಿಶೀಲಿಸಬೇಕಾದ ಒಂದು ಮಹತ್ತ್ವದ ಅಂಶವನ್ನು ದಿ॥ ಪುಣಿಂಚತ್ತಾಯರು ಎತ್ತಿದ್ದಾರೆ. ಅದೇನೆಂದರೆ – ಕೊಟ್ಟಾರಕರ ಮಹಾರಾಜರ ಆಶ್ರಿತನಾಗಿರಬಹುದಾದ ಸುಬ್ಬನೂ ರಾಜನೂ ಪರಸ್ಪರ ಸಹಕರಿಸಿ ಎರಡೂ ರಾಮಾಯಣಗಳನ್ನು ರಚಿಸಿರುವುದು ಸಂಭವನೀಯ ಎಂಬುದಾಗಿ. (ರಾಜರೂ, ಅವರ ಆಶ್ರಿತರಾದ ಕವಿಗಳ ಸಹಾಯ ಪಡೆದು ಕಾವ್ಯರಚನೆ ಮಾಡಿದ ಉದಾಹರಣೆಗಳು ಹಲವು ಇವೆಯಷ್ಟೆ?) ಕಥಕಳಿಯಂತೆ ಸುಬ್ಬನ ಪ್ರಸಂಗಗಳಲ್ಲಿ ರಾವಣವಧಾ ಪ್ರಕರಣ ಇಲ್ಲ. ಕೇವಲ ಸೂಚನಾ ಮಾತ್ರವಾಗಿದೆ. ಅಲ್ಲೂ ಪ್ರಸಂಗಗಳು ಎಂಟು, ಇಲ್ಲೂ ಎಂಟು. ಭಾಷೆ ರಚನೆಗಳ ದೃಷ್ಟಿಯಿಂದ ಕಥಕಳಿ ಕೃತಿಗಳು ಮೂಲವೆಂದೂ ಸುಬ್ಬನದು ಅಂಶತಃ ಅನುವಾದವೆಂದೂ ಕಾಣುವುದು. ಸುಬ್ಬನು ಅನುಕರಿಸಿರುವ ವೃತ್ತಬಂಧಗಳೂ,

ತಾಳದಲ್ಲಿ ನಿಧಾನವಾದ ಚೌಕಕಾಲದ ನಡೆಗೆ ಹೊಂದುವ 'ರಾಘವ ನರಪತೇ ।ಶೃಣು ಮಮ ವಚನಂ' (ಪಂಚವಟಿಯಲ್ಲಿ) ಎಂಬಂತಹ ಪದ್ಯಗಳೂ, ಮುಂದಿನ ಕವಿಗಳಲ್ಲಿ ಕಾಣುವುದಿಲ್ಲ. ಮೂಲ ಅನುವಾದಗಳೆರಡರಲ್ಲೂ ಸುಬ್ಬನ ಕರ್ತೃತ್ವ ಇರುವುದು ಅಸಂಭವವಲ್ಲ.

ದಿ। ಪುಣಿಂಚತ್ತಾಯರ ಊಹೆಗೆ ಪೂರಕವಾಗಿ ಹೇಳಬಹುದಾದ ಒಂದು ಮಾತು– ಕಥಕಳಿ ರಾಮನಾಟ್ಟಂನ ಹುಟ್ಟಿನ ಕುರಿತಾದ ಕಥೆ. ಅಂದು ಕೇರಳದಲ್ಲಿ ಪ್ರಸಿದ್ಧ ನಾಟ್ಯಪ್ರಕಾರವಾಗಿದ್ದುದು ಕೃಷ್ಣನಾಟ್ಟಂ. ಅದರ ಸ್ವಾಮ್ಯವಿದ್ದುದು ಮಾನವೇದನೆಂಬ ಕವಿಯೂ ಆಗಿದ್ದ ರಾಜನಲ್ಲಿ. ತನ್ನ ಆಸ್ಥಾನಕ್ಕೆ ಕೃಷ್ಣನಾಟ್ಟಂ ತಂಡವನ್ನು ಕಳಿಸುವಂತೆ ಈ ಕೊಟ್ಟಾರಕರನು ವಿನಂತಿಸಿದಾಗ, ಮಾನವೇದನು ತಿರಸ್ಕರಿಸಿ, 'ನಿಮ್ಮಲ್ಲಿ ಅದನ್ನು ಅನುಭವಿಸಬಲ್ಲ ರಸಿಕರಿಲ್ಲ' ಎಂದು ಉತ್ತರವಿತ್ತನೆಂದೂ, ಅದಕ್ಕೆ ಪ್ರತಿಕ್ರಿಯೆಯಾಗಿ ಸ್ಪರ್ಧೆಯಾಗಿ ಕೊಟ್ಟಾರಕರ ರಾಜನು ರಾಮನಾಟ್ಟಂನ ಪ್ರಸಂಗಗಳನ್ನು ಬರೆದು ಆಡಿಸಿದನೆಂದೂ ದಂತಕಥೆ. ಇದೊಂದು ಫ್ಯೂಡೆಲ್ ಕಥನ. ಅಂಶತಃ ಸತ್ಯವಿರಬಹುದು. ಆದರೆ ಕಲಾಪ್ರಕಾರಗಳು, ಕೃತಿಗಳು, ಹಾಗೆ ನಾಟಕೀಯವಾಗಿ ಪಕ್ಕನೆ ಹುಟ್ಟುವುದಿಲ್ಲ. 'ಸೇಬುಹಣ್ಣು ಕೆಳಗೆ ಬೀಳುವುದನ್ನು ಕಂಡು ನ್ಯೂಟನ್ನನಿಗೆ ಗುರುತ್ವಾಕರ್ಷಣ ಶಕ್ತಿ ಸಾಕ್ಷಾತ್ಕಾರವಾಯಿತು,' ಎಂಬಂತೆ ಇಂತಹ ಕಥೆಗಳು, ಕಾವ್ಯಾತ್ಮಕ ನಿಜಗಳು. ಆ ಮೊದಲೂ ಬಳಿಕವೂ ನ್ಯೂಟನ್ನನು ಆ ಬಗೆಗೆ ವಿಚಾರ ಮಾಡುತ್ತ ಇದ್ದುದರಿಂದ ತಾನೆ ಸೇಬಿನ ಪ್ರಚೋದನೆ ಕೆಲಸ ಮಾಡಿದ್ದು? ಹಾಗೆಯೆ, ಇಲ್ಲಿ ಆಗಲೇ ಕೊಟ್ಟಾರಕರ ಊರಲ್ಲಿ ಆಸ್ಥಾನದಲ್ಲಿ ನಾಟ್ಯರಂಗಕಲೆ ಇದ್ದಿರಬೇಕು. ಮಾನವೇದನ, ಪ್ರತಿಕ್ರಿಯೆಯಿಂದಾಗಿ ಕೃಷ್ಣನಾಟ್ಟಕ್ಕೆ ಪ್ರತಿಯಾಗಿ, ಅವಸರವಾಗಿ ರಾಮನಾಟ್ಟಂನ್ನು ರೂಪಿಸುವ ನಿರ್ಧಾರ ಮತ್ತು ಅದರ ಕೆಲಸವನ್ನು ಇಬ್ಬರು ಸೇರಿ ಮಾಡಿರುವುದು ಸಾಧ್ಯ.

ಹಾಗಿರುವಲ್ಲಿ – ಅವನಿಗೆ ಕ್ಷಿಪ್ರವಾಗಿ ಎಂಟು –(ಕೃಷ್ಣನಾಟ್ಟಂನಲ್ಲಿ ಎಂಟು ಭಾಗಗಳಿವೆ) –ಪ್ರಸಂಗಗಳ ರಚನೆಗೆ. ಆಗಲೇ ಅಲ್ಲಿದ್ದಿರಬಹುದಾದ ಸುಬ್ಬನ ನೆರವು ಸಿಕ್ಕಿತು. ರಾಮನಾಟ್ಯಂ ಸಿದ್ಧವಾಯಿತು. ಆಗ ಯಕ್ಷಗಾನ ರಾಮಾಯಣ ರಚನೆಗೂ ಸ್ಫೂರ್ತಿ ಸಿಕ್ಕಿತು. ಅವೆರಡೂ ಕೃತಿ ಸರಣಿಗಳೂ ಒಟ್ಟೊಟ್ಟಾಗಿ ರಚಿತವಾದುವು – ಇದು ಪುಣಿಂಚತ್ತಾಯರ ವಾದದ ಒಂದು ದಿಕ್ಕು.

ಕಥಕಳಿ ಮತ್ತು ಕೃಷ್ಣನಾಟ್ಟಗಳ ಹೋಲಿಕೆ ರಾಮನಾಟ್ಟಂನ ಇತಿಹಾಸಗಳ ಪರಿಶೀಲನೆಯಿಂದ ಈ ಕುರಿತು ಇನ್ನಷ್ಟು ಅಧ್ಯಯನವು ಸಾಧ್ಯವಿದೆ. ರಾಜಾ ಕೊಟ್ಟಾರಕರ ಕಾಲದ ಬಗೆಗೂ ವಿವಿಧ ಅಭಿಪ್ರಾಯಗಳಿವೆ. ಕ್ರಿ.ಶ. ೧೪೯೭, ೧೫೫೯, ೧೬೬೦.

**ಮೊದಲಿದ್ದ ಬಯಲಾಟ**

ಪಾರ್ತಿಸುಬ್ಬನು ಹನ್ನೆರಡು ಕೃತಿಗಳನ್ನೂ ರಚಿಸಬೇಕಾದರೆ – ಮೊದಲೇ ಸಿದ್ಧವಾಗಿದ್ದ ಒಂದು ರಂಗಭೂಮಿಗಾಗಿ ಎಂಬುದು ಸ್ಪಷ್ಟ. ಆಗಲೇ ಕನ್ನಡದಲ್ಲೂ ತೆಲುಗಿನಲ್ಲೂ ಯಕ್ಷಗಾನ ರಚನೆಗಳೂ ನಾಟ್ಯರಂಗವೂ ಇದ್ದಿತೆಂಬುದು ಸುವಿದಿತ. ಇಲ್ಲವಾದರೆ ಅಷ್ಟೊಂದು ಯಕ್ಷಗಾನಗಳನ್ನು ಅವನು ಹೇಗೆ ಬರೆಯಲು ಸಾಧ್ಯವಾಯಿತು? ಆಗಲೇ ಇದ್ದ ಬಯಲಾಟಗಳಿಗೆ (ಬಹುಶಃ ಅವು ಇಂದು ನಾವು ಬಡಗುತಿಟ್ಟು ಎಂದು ಹೇಳುವ ಆಟಗಳ ಪ್ರಾಚೀನ ಪ್ರೋಟೊರೂಪಗಳಾಗಿರಬಹುದು) – ಸುಬ್ಬನು ಹೊಸ ಸಂಸ್ಕಾರವನ್ನೂ, ವ್ಯವಸ್ಥಿತವಾದ ವಿಸ್ತೃತ ಪೂರ್ವರಂಗ(ಸಭಾಲಕ್ಷಣ ಕೃತಿ ಮತ್ತು ಪ್ರಯೋಗವಿಧಾನ)ವನ್ನೂ ಅಳವಡಿಸಿದನೆಂದು ಊಹಿಸಬಹುದು. ಸುಬ್ಬನ ಕೃತಿಗಳಲ್ಲಿ ಕಾಣುವ ಅನೇಕ ಪದ್ಯಬಂಧ (ಛಂದಸ್ಸುಗಳು) ಮಧ್ಯಮಾವತಿ ತ್ರಿವುಡೆ, ಕೇದಾರಗೌಳ ಅಷ್ಟ, ನವರೋಜು ಏಕ, ಶಂಕರಾಭರಣ ತ್ರಿವುಡೆ ಮೊದಲಾದುವು ಆಗಲೇ ಪೂರ್ವದ ಬಯಲಾಟಗಳಲ್ಲಿ ಇದ್ದವುಗಳಿದ್ದಿರಬೇಕು.

ಸುಬ್ಬನ ರಚನೆಗಳ ಸಾಹಿತ್ಯ ಮತ್ತು ಸಂಗೀತಾಂಶಗಳ ಕುರಿತಾಗಿ, ಈಗಾಗಲೇ ಕುಕ್ಕಿಲ, ಕಾರಂತ, ಡಾ. ನಾರಾಯಣ ಶೆಟ್ಟಿ, ಡಾ. ನಂಬಿಯಾರ್, ಡಾ.ವಸಂತ ಭಾರದ್ವಾಜ, ಡಾ. ಆನಂದರಾಮ ಉಪಾಧ್ಯ ಮೊದಲಾದವರು ಸಾಂದರ್ಭಿಕವಾಗಿ ವಿವೇಚಿಸಿದ್ದಾರೆ. ಆದರೂ ಅವನ ಬಂಧಗಳು, ಸಂಗೀತವಿಧಾನ, ರಚನಾವೈಶಿಷ್ಟ್ಯಗಳ ಕುರಿತು ವಿಸ್ತಾರವಾದ ವಿವೇಚನೆಗೆ ಅವಕಾಶವುಂಟು. ಮಾತ್ರವಲ್ಲ – ಕುಕ್ಕಿಲರು ನಿರ್ಧರಿಸಿರುವ – ಸುಬ್ಬನು ಹೇಳುವ ಬತ್ತೀಸಾಕೃತಿರಾಗ, ತಾಳ'ಗಳ ಬಗೆಗೆ, ಸುಬ್ಬನ ಸಂಗೀತ ನುಡಿಗಟ್ಟು, ಒಙುಛಿಚಿಟ ಕುಡಿಛಿಜ ಕುರಿತು  ಮುಂದುವರಿದ ಪರಿಶೀಲನೆ ಪರಾಮರ್ಶೆ ನಡೆಸಬಹುದು.

**ಮತ್ತೊಂದು ಹಿರಿಮೆ :**

ಪಾರ್ತಿಸುಬ್ಬನ ಕಾವ್ಯದ ಪ್ರಾಚುರ್ಯದಲ್ಲಿಗಮನಿಸಬೇಕಾದ ಅಂಶವೆಂದರೆ – ಅವನ ಪ್ರಸಂಗಗಳಿಗೆ ಯಕ್ಷಗಾನದ ಎಲ್ಲ ಪ್ರಾದೇಶಿಕ ಪ್ರಭೇದಗಳಲ್ಲಿ, ತಿಟ್ಟುಗಳಲ್ಲಿ ಇರುವ ಏಕಪ್ರಕಾರವಾದ ಪ್ರಾಶಸ್ತ್ಯ. ಅಂದರೆ ಉಳಿದ ಹಲವು ಪ್ರಸಂಗಗಳ ಹಾಗೆ (ಉದಾ: ಸುಧನ್ವ, ಕೃಷ್ಣಾರ್ಜುನ, ತಾಮ್ರಧ್ವಜ, ಕರ್ಣಪರ್ವ ಮೊದಲಾದುವು) ಎರಡು ಯಾ ಹೆಚ್ಚು ಪ್ರಸಂಗಗಳು ಬಳಕೆಯಿಲ್ಲ. ವಿಶೇಷತಃ ಪಟ್ಟಾಭಿಷೇಕ, ಪಂಚವಟಿ, ಚೂಡಾಮಣಿ, ಕೃಷ್ಣ ಚರಿತೆ, ಐರಾವತ (ಈಗ ಅಷ್ಟಾಗಿ ಎಲ್ಲೂ ಬಳಕೆಯಿಲ್ಲ) – ಇವುಗಳು ಎಲ್ಲೆಡೆ ಅದೇ ಪ್ರಸಂಗಗಳು. ಇದಕ್ಕೆ ಕಾರಣ ಅವುಗಳ ಪ್ರಾಚೀನತೆ ಮತ್ತು ಶ್ರೇಷ್ಠತೆ. ದೂರದ ಬಳ್ಳಾರಿಯ ಗೊಂಬೆಯಾಟದಲ್ಲೂ 'ಪಂಚವಟಿ'ಯ ಪದ್ಯಗಳನ್ನು ಕೇಳಿ, ತಾವು ಆಶ್ಚರ್ಯಪಟ್ಟುದನ್ನು ಡಾ. ಕಾರಂತರುದಾಖಲಿಸಿರುವರು. ರಾಮಾಯಣವನ್ನು ಬರೆದ ಇತ್ತೀಚಿನ ಅನೇಕ ಕವಿಗಳು ಸುಬ್ಬನನ್ನು ಅನುಕರಿಸಿದುದು ಕಾಣುತ್ತದೆ. ಬೇರೆ

ಕಥೆಗಳಲ್ಲೂ ಕೂಡ. ಉದಾ: ಪ್ರಸಿದ್ಧ ಗದಾಪರ್ವ(ಅಜ್ಞಾತಕವಿಕೃತ ವಿಟ್ಲದ ಪಂಚಲಿಂಗೇಶ್ವರ ಸ್ತುತಿ ಇದ್ದುದು)ದಲ್ಲಿ ದುರ್ಯೋಧನನು ಕೃಷ್ಣನನ್ನು ನಿಂದಿಸುವ ಪದಗಳು.

**ಶ್ರೇಷ್ಠನಹುದಹುದೋ । ಗೋವಳರಾಯ । ಶ್ರೇಷ್ಠ...**
**ಇವು – ಜಾಣನಹುದಹುದೋ । ಸಂಗರಕತಿ । ತ್ರಾಣನಾಹುದಹುದೋ**

– ಎಂಬ ವಾಲಿಸಂಹಾರದಲ್ಲಿ ವಾಲಿಯು ರಾಮನನ್ನು ನಿಂದಿಸುವ ಪದಗಳ ಆಧಾರದಲ್ಲಿ ರಚಿತವಾಗಿವೆ.

**ಪದಪ್ರಯೋಗ**

ಸುಬ್ಬನ ಕುರಿತಾದ ಚರ್ಚೆಯಲ್ಲಿ ಸದಾ ಪ್ರಸ್ತಾವಕ್ಕೆ ಬಂದ ಒಂದು ಮುಖ್ಯ ವಿಷಯವೆಂದರೆ ಆತನ ಪದ ಪ್ರಯೋಗಗಳ ವೈಶಿಷ್ಟ್ಯ. ಆತನು ಕೇರಳೀಯ ಪ್ರಭಾವದಿಂದ ಅಲ್ಲಲ್ಲಿ ಅರಿಶಿಡೀಯ ಕೇಕಯ ಮೊದಲಾದ ವೃತ್ತಗಳನ್ನು ಬಳಸಿದ್ದಾನೆ (ಕುಕ್ಕಿಲರ ಶೋಧನೆ) –ಉದಾ

**ಪ್ರಾಪ್ರಾನಂತ ಘನಶ್ರೀಯಃ ಪ್ರಿಯತಮಃ ಶ್ರೀರೋಹಿಣೀ ಜನ್ಮನೋ (ಕಥಕಳಿ)**
**ಧಾತ್ರೀಗುತ್ತಮ ಕಣ್ವನಾಮಪುರದೀ ನಿಂತಿರ್ದ ಶ್ರೀಕೃಷ್ಣನಾ (ಸುಬ್ಬ)**
**ಶ್ರೀರಾಮಂ ದಿವಿಜೌಘವಂದಿತಪದಂ.... (ಕ)**
**ಶ್ರೀರಾಮಾಖ್ಯನ ಮಾತ ಕೇಳ್ದು ರವಿಜಂ ಸದ್ಧೈರ್ಯಮಂ ತಾಳುತಂ (ಸು)**
**ಇತ್ಯಾದಿ**

ಹಲವು ತುಳು ಮಲೆಯಾಳಿ ಶಬ್ದಗಳು ಅವನ ಕೃತಿಗಳಲ್ಲಿವೆ. ಉದಾ.: ಶೂರ್ಪನಖಿಯು ಲಕ್ಷ್ಮಣನಲ್ಲಿ ಮಾತನಾಡುತ್ತಾ ... 'ಇನ್ನು ತಾಮಸಗೊಳದಿರು । ತಾಳಲಾರೆನು ನಾ...' ಇಲ್ಲಿ 'ತಾಮಸ'ವೆಂದರೆ ನಿಧಾನ, ತಡ, ವಿಲಂಬ ಎಂಬ ಮಲೆಯಾಳದ ಅರ್ಥ. ಇದನ್ನು ಅರಿಯದವರು 'ಕೋಪಮಾಡದಿರು' ಎಂದು ಅರ್ಥಾಂತರವನ್ನು ಕಲ್ಪಿಸಿ ಹೇಳಿದ್ದನ್ನು ಕಂಡಿದ್ದೇನೆ – ಇದು ಸ್ವಾಭಾವಿಕ.

ಹಾಗೆಯೆ ಮಾನಿನಿಮಾರ್–ಮೌಳೆ (ಮಾರ್, ಬಹುವಚನ) ಬಟ್ಟಿ (ತುಳು, ಕುಕ್ಕೆ) ಮುತ್ತುವುದು (ತುಳು = ನಾಶವಾಗು) ಮಾಂತ (ತುಳು = ಎಲ್ಲವೂ) ಹೀಗೆ. ಇನ್ನಷ್ಟು ಹಸ್ತಪ್ರತಿಗಳನ್ನು ನೋಡಿದಲ್ಲಿ ಹಲವು ವೈಶಿಷ್ಟ್ಯಗಳು ದೊರೆಯಬಹುದು.

**ಐತಿಹ್ಯ–ಇತಿಹಾಸ**

ಸುಬ್ಬನ ಕುರಿತು ಕುಂಬಳೆ ಕಾಸರಗೋಡು, ಪಡ್ರೆ, ಮಾನ್ಯ ಮೊದಲಾದೆಡೆಗಳಲ್ಲಿ ಹಲವು ಜನಶ್ರುತಿಗಳು, ಐತಿಹ್ಯಗಳು ಪ್ರಚಲಿತವಿದ್ದುವು, ಇವೆ. ಇವುಗಳು : ಅವರು

ಪಾರ್ವತಿ ಎಂಬವಳ ಮಗ. ತಂದೆಯನ್ನು ಬಾಲ್ಯದಲ್ಲಿ ಕಳಕೊಂಡುದರಿಂದ ಯಾ ದೂರ ಇದ್ದ ಕಾರಣ, ತಾಯಿಯ ಹೆಸರಿನಲ್ಲಿ ಪ್ರಸಿದ್ಧನಾದನು. ಅವನು ಚೆರುಕುನ್ನು ಕ್ಷೇತ್ರ (ನೋಡಿರಿ : ಸಭಾಲಕ್ಷಣದ ಪದ – ಶರಣು ತಿರುವಗ್ರ ಶಾಲಿವಾಹಿನಿ. ನಿಜವಾಗಿ ಇದು ತಿರು, ಅಗ್ರಶಾಲೆ (ಅನ್ನದಾನಕ್ಕೆ ಪ್ರಸಿದ್ಧವಾದ) ವಾಸಿನಿ ಅಲ್ಲಿರುವ ದೇವಿ, ಅನ್ನಪೂರ್ಣೆ)ದಲ್ಲಿದ್ದುದು, ಅವನ ತಮ್ಮನು ಕಥಕಳಿಯಲ್ಲಿ ವೇಷಧಾರಿಯಾಗಿದ್ದುದು, ಸುಬ್ಬನು ತಿರುವಾಂಕೂರಿನಲ್ಲಿ ವಿದ್ಯಾಭ್ಯಾಸ ಹೊಂದಿದುದು ಮೊದಲಾದುದು. ಅದೇರೀತಿ – ಕುಂಬಳೆ ಶೇಡಿಕಾವು (ಕಿಟಿಕಾವು, ಕೆಡ್ಕಾವು) ಶಂಕರನಾರಾಯಣ ಕ್ಷೇತ್ರದಲ್ಲಿದ್ದ ಅವನು ಬರೆಯಲು ಕುಳ್ಳಿರುತ್ತಿದ್ದ ಪಾರ್ತಿಸುಬ್ಬನ ಕಟ್ಟೆ, ಅದರಲ್ಲಿದ್ದ ಮುರಕಲ್ಲಿನ ಪೀಠ, ಸುಬ್ಬನು ವಾಸಿಸುತ್ತಿದ್ದ ಪಾರ್ತಿಸುಬ್ಬನ ಹಿತ್ತಿಲು, ಮಾನುದಾಸನ ಹಿತ್ತಿಲು, ಅವನ ಇನ್ನೊಂದು ಆರಾಧ್ಯಕ್ಷೇತ್ರ ಕಿದೂರು ಮಹಾಲಿಂಗೇಶ್ವರ ದೇವಳ, ಅವನ ೨೦೦ ವರ್ಷಗಳ ಬಳಿಕ ಬದುಕಿದ್ದು ಭಾಗವತನಾಗಿದ್ದನೆನ್ನಲಾಗುವ – ಇನ್ನೊಬ್ಬ ಪಾರ್ತಿಸುಬ್ಬನ (ವಂಶೀಯ?) ವಿಚಾರಗಳಿವೆ. ಇವುಗಳನ್ನೆಲ್ಲ ಓರ್ವ ಸೂಕ್ತ ಸಂಶೋಧಕರುಸಂಗ್ರಹಿಸಿ ದಾಖಲಿಸಿ, ಲಭ್ಯ ದಾಖಲೆ ಪ್ರತಿಗಳನ್ನೆಲ್ಲ ಮೈಕ್ರೋಫಿಲ್ಮ್ ಸಂಗ್ರಹಿಸುವುದು, ವಿಶ್ಲೇಷಿಸುವುದು ತುರ್ತಾಗಿ ಆಗಬೇಕಿದೆ.

ಈ ಪ್ರದೇಶದ ಯಕ್ಷಗಾನದ ಬಲುದೊಡ್ಡ ಪೋಷಕರಾಗಿದ್ದ – ಕೂಡ್ಲು ಶ್ಯಾನುಭಾಗ ಮನೆತನ, ಕೋಡಿಂಗಾರು ಮತ್ತು ಇಚ್ಲಂಪಾಡಿ ಗುತ್ತುಗಳ ಬಂಟ ಮನೆತನಗಳಲ್ಲಿ ಇದ್ದ ಬಹುಪಾಲು ಅಮೂಲ್ಯ ದಾಖಲೆಗಳು ನಷ್ಟವಾಗಿವೆ. ಉಳಿದುವನ್ನು ಅಕಾಡೆಮಿ ಮತ್ತು ಕಣ್ಣೂರು ವಿವಿ ಸಂಗ್ರಹಿಸಬೇಕೆಂದು ಕೋರುತ್ತೇನೆ.

**ಮದವೂರಿನ ದೇವಳದ ಮುಖಮಂಟಪ**

ಸುಬ್ಬನ ವಿಷಯದ ಒಂದು ಮುಖ್ಯ ದಾಖಲೆ – ಮದೂರು ಮದನೇಶ – ವಿಘ್ನೇಶ ದೇವಳದ ಮುಖಮಂಟಪದಲ್ಲಿರುವ ಬಹುಸುಂದರ ಕಲಾಕೃತಿ – ಪುತ್ರಕಾಮೇಷ್ಟಿ ಪ್ರಸಂಗದ ಮರದ ಕೆತ್ತನೆಗಳು. ಇವು ತೆಂಕಣ ಯಕ್ಷಗಾನದ ವೇಷಗಳನ್ನು ಮತ್ತು ಕೇರಳೀಯ ಶಿಲ್ಪ ಸಂಪ್ರದಾಯವನ್ನು ಕೂಡಿಸಿ ಕೆತ್ತಿದ ಶಿಲ್ಪಗಳು. ಇವು ಸುಬ್ಬನು ಪುತ್ರಕಾಮೇಷ್ಟಿ ಪ್ರಸಂಗವನ್ನು ರಚಿಸಿ ಮೊದಲಾಗಿ ಅಲ್ಲಿ ಪ್ರಯೋಗಿಸಿದುದರ ನೆನಪಿಗಾಗಿ ಸ್ಥಾಪಿಸಿದ್ದೆಂದು ಕುಕ್ಕಿಲರು ಹೇಳಿದ್ದಾರೆ. ಗಣಪತಿ ಮತ್ತು ಶಿವನ ದೇವಳದಲ್ಲಿ ರಾಮಾಯಣದ ಶಿಲ್ಪಗಳು ಇರುವುದು, ಅಷ್ಟು ಸಹಜವಲ್ಲದುದರಿಂದ, ಈ ಹೇಳಿಕೆ ನಿಜವಿರಬೇಕು.

ಕೇರಳದ ಬೇರೆ ದೇವಾಲಯಗಳ ಮುಖಮಂಟಪಗಳಲ್ಲೂ ಈ ತರಹದ ಕತೆಗಳ ಶಿಲ್ಪ/ಚಿತ್ರಗಳು ಇವೆಯೆಂದು ಕೇಳುತ್ತೇವೆ. ಈ ಕುರಿತೂ ಹೋಲಿಸಿ ನೋಡಬೇಕಿದೆ.

ಮಧೂರಿನ ಆ ಕೆತ್ತನೆಗಳ ಕಾಲವನ್ನು ಕಾರ್ಬನ್ ಡೇಟಿಂಗ್ ವಿಧಾನದಲ್ಲಿ ಪರಿಶೀಲಿಸಿದಲ್ಲಿ ಸುಬ್ಬನ ಕಾಲದ ಬಗೆಗೆ ಹೆಚ್ಚಿನ ತಿಳಿವು ಉಂಟಾಗಬಹುದು.

**ಒಂದು ಬಹಳ ಮುಖ್ಯವಾದ ಪದ್ಯಸಮುಚ್ಚಯ**

ಸುಬ್ಬನು ಕುಂಬಳೆಯವನೆಂದು ಸ್ಥಾಪಿಸುವ ಒಂದು ಸನ್ನಿವೇಶ – ಈ ವರೆಗೆ ಯಾರ ಗಮನಕ್ಕೂ ಬಾರದೆ – ಇದೆ. ಅದೆಂದರೆ ಐರಾವತ ಪ್ರಸಂಗದಲ್ಲಿ ಬ್ರಾಹ್ಮಣರು ಸಮಾರಂಭಕ್ಕೆ ಬರುವ ಸಂಭ್ರಮದ ಹಾಸ್ಯ ಭಾವದ ಪದ್ಯಗಳು. ಅದರಲ್ಲಿ 'ವಿಪ್ರರು ಬರುತಿರ್ದ್ದರಾಗ' ಎಂದು ಆರಂಭವಾಗುವ ಒಂಬತ್ತು ಪದ್ಯಗಳಲ್ಲಿ ಹವ್ಯಕ, ತೆಲುಗು, ಮರಾಠಿ, ಶಿವಳ್ಳಿ, ತಿಗಳ, ಮಲೆಯಾಳಿ, ಕೊಂಕಣಿ ಭಾಷೆಗಳಲ್ಲಿ ಆ ಆ ಬ್ರಾಹ್ಮಣರು ಮಾತಾಡಿಕೊಂಡು ಬರುವ ವಿನೋದಕರವಾದ ಮಾತುಗಳಿವೆ. ಉದಾ :ಎಪ್ಪುಡು ರಾವುಂದಿ.... ಎವಿಡೆಯಾನ್ ತರವಾಡ್...., ಖ್ಯೆಂಗೆಲೊ ರಾಮ್‌ಭಟ್ಟು...., ಉಂಬಲೆ ಹೋಪಪ್ಪಯ್ಯ.... ಇತ್ಯಾದಿ. ಗಮನಾರ್ಹ ಸಂಗತಿಯೆಂದರೆ ಕುಂಬಳೆಯಲ್ಲಿ ಅಷ್ಟೇನೂ ಇರದ ಮಲಯಾಳಿ, ತಿಗಳ ಮೊದಲಾದವರನ್ನು ತಂದರೂ, ಕೋಟಬ್ರಾಹ್ಮಣರ ಭಾಷೆಯಲ್ಲಿ ಪದ್ಯವಿಲ್ಲ! ಕಾರಣ ಸ್ಪಷ್ಟ. ಕುಂಬಳೆಯಲ್ಲಿ ಬಹಳ ಹಿಂದಿನಿಂದ ಕೋಟಬ್ರಾಹ್ಮಣರು ಶ್ರೀಕೃಷ್ಣ ದೇವಾಲಯದ ಪವಿತ್ರಪಾಣಿ – ಅಡಿಗಳು ಆಗಿರುವವರು. ಅವರನ್ನು ತಮಾಷೆ ಮಾಡಬಾರದೆಂಬುದು ಉದ್ದೇಶವಿರಬೇಕು.

ಅದೇ – ರಾಮಾಯಣದಲ್ಲಿ ವಿಭೀಷಣನು ರಾವಣನಿಗೆ ನೀತಿ ಹೇಳುವ ಭಾಗದಲ್ಲಿ ಬೇರೆ ಬೇರೆ ಆಡುಮಾತಿನ ಶೈಲಿಯನ್ನು ತರುವಾಗ

**'ಸೀತಾದೇವಿಯ ಕರಕೊಣಕು । ಒಳ್ಳೆ ।**
**ಜಾತಿ ಮಾಣಿಕ್ಯ ಮುತ್ತುಗಳ ತೆಕ್ಕೊಣಕು ।**
**ಈ ತಪ್ಪ ಪಾಲೀಸೆಂದೆನುಕು । ರಘು ।**
**ನಾಥಸ್ವಾಮಿಯ ಪಾದವ ಕಟ್ಟಿಕೊಣಕು ॥**

– ಎಂದು ಕೋಟಬ್ರಾಹ್ಮಣರ ಭಾಷೆಯಲ್ಲಿ ಪದ್ಯವನ್ನು ರಚಿಸಿರುವನು. ಇದು ಗಂಭೀರವಾದ ಸಂದರ್ಭದಲ್ಲಿ ಬಳಸಿದ್ದಷ್ಟೆ. ಇದರಿಂದ ಮೇಲಿನ ಊಹೆ ಬಲಗೊಳ್ಳುತ್ತದೆ.

**ರಂಗಸಂಪ್ರದಾಯದಲ್ಲಿ**

ತೆಂಕುತಿಟ್ಟಿನ ರಂಗಸಂಪ್ರದಾಯದಲ್ಲಿ ಸುಬ್ಬನ ಸಭಾಲಕ್ಷಣವು ಸ್ಥಾಪಿತವಾಗಿದೆ. ಅದೇ ಮುಂದೆ ಬಡಗುತಿಟ್ಟಿಗೂ ಪಸರಿಸಿರಬೇಕು. ಏಕೆಂದರೆ 'ಮುದದಿಂದ ನಿನ್ನ ಕೊಂಡಾಡುವೆನು ಅನವರತ । ಮದವೂರ ವಿಘ್ನೇಶ ದೇವ ಜಗದೀಶ ।' ಎಂಬುದು ಎಲ್ಲೆಡೆಗಳಲ್ಲಿ ನಿಯಮವಾಗಿ ಆರಂಭದ ಪದ್ಯವಾಗಿ ಬಳಕೆಯಲ್ಲಿದೆ. ಅದೇ ರೀತಿ

‘ನೆನೆಯಿರೊ ಜನರೆಲ್ಲ ಗುಣಯುತನ । ಘನಮೂರ್ತಿ ಮದವೂರ ಗಣನಾಥನ ॥’ ಎಂಬ ಸ್ತುತಿ ಕೂಡ.

ಸಭಾಲಕ್ಷಣದ ಕೊನೆಯ ಭಾಗದಲ್ಲಿ ‘ಪೊಡವಿಯೊಳುತ್ತಮ ಇಡಗುಂಜಿ ಪುರದೊಳು । ದೃಢವಾಗಿ ನೆಲೆಸಿದ । ಒಡೆಯ ವಿಘ್ನೇಶ’ ಎಂಬ ಪದವಿದೆ. ಅಂದರೆ ಇದು ಸಭಾಲಕ್ಷಣವು ಮದವೂರಿನಿಂದ ಇಡಗುಂಜಿಯ ತನಕ ಪಸರಿಸಿದ ಕ್ರಮದ ದಾಖಲೆಯಾಗಿರಬಹುದು.

ಅಂತೆಯೆ ಹಿಂದೆ ಕಥಾರಂಭದಲ್ಲಿ ಸುಬ್ಬನ ‘ಹರಿಗಂ ವೀರಗಣಾಧಿಪಂಗೆ ಶಿವಗಂ.... ಕೃತಿ ಪೇಳ್ವೆ ಸಂತೋಷದಿಂ ॥
ಗುರುವೆ ಪರಮಾನಂದ ಸದ್ಗುರು ನಿರತಪಾವನ ಚರಿತ ।....ಮದಗಜವದನಂ ತಂ ವಿಘ್ನವಿಚ್ಛೇದದಕ್ಷಂ...

ಈ ಪದ್ಯಗಳನ್ನು ಹೇಳುವುದು ಪದ್ಧತಿಯಾಗಿತ್ತು. ಈಗ ಆ ಸ್ಥಾನಗಳಲ್ಲಿ – ‘ಇಂದಿರೆಗೆ ತಲೆಬಾಗಿ...’, ‘ಅಂಬುರುಹದಳನೇತ್ರೆ’(ಕವಿ ದೇವಿದಾಸನ ಪದ್ಯಗಳು) ಹಾಗೂ ಬೇರೆ ತುಂಡುಪದಗಳೂ ಬಳಕೆಗೆ ಬಂದಿವೆ.

ದೇವೇಂದ್ರ ಅರ್ಜುನಾದಿ ಪೀಠಿಕೆ ವೇಷಗಳ ಒಡ್ಡೋಲಗದ ಪದ್ಯಗಳಾದ ‘ದೇವ ದೇವ ದಯಾಸಾಂದ್ರ...’ ಮೊದಲಾದುವು ಸುಬ್ಬನ ರಚನೆಗಳು. ಎಲ್ಲೆಡೆ ಬಳಕೆ ಇದೆ.

**ಕಾವ್ಯಪರಿಶೀಲನೆ**

ಸುಬ್ಬನ ವಿಶಾಲವಾದ ಪದ ಪದ್ಯಗಳ ಸಮೂಹವನ್ನು, ರಂಗ ಮತ್ತು ಸಾಹಿತ್ಯಕವಾಗಿ ಸಂಕ್ಷೇಪವಾಗಿ ಪರಿಶೀಲಿಸುವುದು ಕೂಡ ದೊಡ್ಡ ಕೆಲಸ. ಇಲ್ಲಿ ಅದಕ್ಕೆ ಕೈಹಾಕದೆ – ಕೇವಲ ಸೂಚನಾ ಮಾತ್ರವಾಗಿ ಹೇಳುವುದಷ್ಟೆ.

ಆಕರದ ಕಥೆ, ಕಾವ್ಯ, ಸನ್ನಿವೇಶಗಳನ್ನು ಸೊಗಸಾಗಿ – ಪ್ರಸಂಗೀಕರಿಸುವ, ನಾಟಕವಾಗಿ ಸಂವಹಿಸುವ ಮತ್ತು ಉತ್ತಮ ಗೇಯ ಗುಣವನ್ನು ಪ್ರಕಾಶಿಸುವಲ್ಲಿ ಸುಬ್ಬನು ಅಪ್ರತಿಮ ಕವಿ. ಅವನು ವಿದ್ವಾಂಸನಾದರೂ ಅವನ ಕವಿತೆಗೆ ಆ ಪಾಂಡಿತ್ಯದ ಭಾರವಿಲ್ಲ. ಸಂಸ್ಕೃತ ಭೂಯಿಷ್ಠವಾಗಿ ಬರೆಯ ಬಲ್ಲವನಾದರೂ, ಅವನು ತಿಳಿಗನ್ನಡದಲ್ಲಿ ಸರಳ ಸುಂದರ ಗೀತಗಳಾಗಿ ಬರೆದುದೆ ಹೆಚ್ಚು. ಸ್ವಭಾವೋಕ್ತಿ ಎಂಬುದು ಕಾವ್ಯದಲ್ಲಿ ಸುಲಭವಾಗಿ ಕಾಣುವ ಕಠಿನವಾದ ಸಿದ್ಧಿ. ಸುಬ್ಬನಲ್ಲಿ ಅದು ಉತ್ಕೃಷ್ಟಮಟ್ಟದಲ್ಲಿದೆ.

'ಕಿವಿಗಿಳಿಯುತ್ತಲೆ ಹೃದಯವನು ತಲುಪುವ ಗುಣ' (ಡಾ. ಕಾರಂತರ ಮಾತು) ಅವನ ಪದ್ಯಗಳಿಗಿದೆ.

**ಉದಾ:**

ಬಂದೆಯಾ ಇನವಂಶವಾರಿಧಿ । ಚಂದಿರನೆ ನಾ ಬರುವಾಗ ನಿನ್ನೊಡ ।
ನೆಂದುದಿಲ್ಲವೆನುತ್ತ ಮನದಲಿ । ನೊಂದೆಯೇನೈ
...
ಅಣ್ಣ ನೀವ್ ಮೂವರಾರಣ್ಯದೊಳಿರುವಾಗ । ಬಣ್ಣವೆ ತನಗೆ ರಾಜ್ಯ
ಪುಣ್ಯಪುರುಷ ನಿನ್ನ ಪಾದವ ಬಿಡನೆಂದು । ಕಣ್ಣನೀರನು ತುಂಬಿದ ॥
(ಪಾದುಕಾಪ್ರದಾನ)

ತೊರವೆಯಲ್ಲಿ ವಾಲಿಯು ರಾಮನನ್ನು ಜರೆಯುವ ಹದಿನೈದು ಭಾಮಿನಿಷಟ್ಪದಿಗಳನ್ನು, ಮೂರು ಪದ್ಯಗಳಲ್ಲಿ ಅದ್ಭುತವಾಗಿ ಸಂಗ್ರಹಿಸಿದ ಜಾಣನಹುದಹುದೋ... ಈ ಪದ್ಯಗಳು.

ಕಂದ ನಿನಗೀ ಕುಟಿಲತನಗಳು...
ನೀನೇಕೆ ಮರುಳಪ್ಪುದಣ್ಣ...
ಏನೆಂದೇ । ತಮ್ಮ ಏನೆಂದೆ ।... (ಸೇತುಬಂಧನ ವಿಭೀಷಣನೀತಿ)

ಕಂಡಿರೇ ಸಮುದ್ರರಾಜನ... (ವರ್ಣನೆ)

ಮಾತಾಡಬಾರದೇನೆ....
ಮಾರನಾಸ್ತ್ರ ತಾಗಿ... (ಚೂಡಾಮಣಿಯಲ್ಲಿ)

ಎಂಬ ದೀರ್ಘ ಪದ್ಯಗಳು.

ಕುಶಲವರನು ಕಂಡ ರಾಮ (ಕುಶಲವದಲ್ಲಿ)
–ಹೀಗೆ ನೂರಾರು ಉದ್ಧರಿಸಬಹುದು.

ಸುಬ್ಬನ ಪ್ರಸಂಗಗಳಲ್ಲೆ, ಪ್ರತ್ಯೇಕ ಸ್ವಭಾವದ, ದೀರ್ಘವೂ ಆಗಿರುವ 'ಐರಾವತ'(೫೧೯ ಪದ್ಯಗಳು)ವು ಜಾನಪದ ಜೀವನದ, ಕೌಟುಂಬಿಕ ಜೀವನದ ಚಿತ್ರಣಗಳ, ಅಸಾಧಾರಣವಾದ ಕೃತಿಯಾಗಿದೆ.

**ಇಂತಹ ಶ್ರೇಷ್ಠ ಕವಿಯ ಕೃತಿಗಳಲ್ಲಿ ಎದ್ದು ಕಾಣುವ ಒಂದೆರಡು ವಿಚಿತ್ರ ಅಂಶಗಳು.**

೧. ರಾಮಾಯಣದ ಪ್ರಮುಖ ಪಾತ್ರಗಳಲ್ಲಿ ಒಂದಾದ ರಾವಣನಿಗೆ ಪ್ರವೇಶಕ್ಕೆ ಪದ್ಯವಿಲ್ಲದಿರುವುದು. 'ದಶಕಂಠನನುಜೆಯ ಕಂಡನು' – ಎಂದೇ ಆರಂಭ. (ಇದಕ್ಕಾಗಿ ಭಾಗವತರುಗಳು ತೊರವೆಯ 'ಲವನೆ ಕೇಳ್ ಸುರನರ ಭುಜಂಗಮ । ಭುವನದಲ್ಲಣ ದಶವದನ...' ಎಂಬುದನ್ನು ಕಿಸೆಪದ್ಯವಾಗಿ ಕೊಡುತ್ತಾರೆ.)

೨. ಖರದೂಷಣ ವಧೆಯಲ್ಲಿ ಖರನಿಗೂ, ತ್ರಿಶಿರನಿಗೂ ಸಮರ್ಪಕ ಪದ್ಯಗಳಿಲ್ಲ. ದೂಷಣವಧೆ ಒಂದೇ ಪದ್ಯದಲ್ಲಾಗುತ್ತದೆ.

೩. ರಾಮ–ಕುಂಭಕರ್ಣನ ಸಂವಾದದಲ್ಲಿ
'... ನಾನು ರಾಮ । ಕುಂಭಕರ್ಣ । ನೀನು ರಾಕ್ಷಸ' ಎಂಬ ಸಾಮಾನ್ಯ ಪದ್ಯ,

೪. ಅಂಗದ ಸಂಧಾನದಲ್ಲಿ ಅತಿ ದೀರ್ಘವಾದ ಸಂಭಾಷಣೆಗಳ, ಅಷ್ಟತಾಳದ ಪದ್ಯಗಳ ಬಾಹುಳ್ಯ.

– ಇದಕ್ಕೆಲ್ಲ ಅಂದಿನ ರಂಗಸಂಪ್ರದಾಯಗಳೂ ಕಾರಣವಿರಬಹುದು. ಇಂದಿನ 'ಮೇಳ'ವನ್ನು ಗಣಿಸಿ ಹಿಂದಣ ಪ್ರಸಂಗಗಳನ್ನು ವಿವರಿಸುವುದು ಎಲ್ಲ ಸಂದರ್ಭಗಳಲ್ಲಿ ಸರಿಯಾಗದು.

**ಅದ್ಭುತ ಪ್ರಯೋಗಕಾರ**

ಕನ್ನಡ ಕರಾವಳಿಯ ತೆಂಕಣಭಾಗದಲ್ಲಿ ಪಾರ್ತಿಸುಬ್ಬನು 'ಯಕ್ಷಗಾನದ ಮೂಲಪುರುಷ' ಎಂಬೊಂದು ಪ್ರತೀತಿಯಿದೆ. ಹಲವರು ಲೇಖಕರೂ ಇದನ್ನು ಉದ್ಧರಿಸಿದ್ದಾರೆ. (ನೋಡಿರಿ : ಪಾರ್ತಿಸುಬ್ಬನ ಯಕ್ಷಗಾನಗಳು, ಕುಕ್ಕಿಲರ ಪೀಠಿಕೆ). ಇದರ ಅರ್ಥವೇನು? ಅಂದರೆ – ಆಗಿನ ಕಾಲದಲ್ಲಿ ತಮ್ಮ ಸುತ್ತ ಇದ್ದುದೆ ಯಕ್ಷಗಾನ ಅಂದರೆ ತೆಂಕುತಿಟ್ಟು. ಸುಬ್ಬನು ಆಗಲೇ ಪ್ರಚಲಿತವಿದ್ದ ಆಟಗಳನ್ನು ಪರಿಷ್ಕರಿಸಿ, ಈಗಿನ ತೆಂಕುತಿಟ್ಟಿನ ಮೂಲರೂಪವನ್ನು ಆವಿಷ್ಕರಿಸಿದವನಿರಬೇಕು. ಅದಕ್ಕೆ ಅವನು ರಾಮನಾಟ್ಟಂಮತ್ತು ಅಂದಿನ ಸಾಮಾನ್ಯ ಯಕ್ಷಗಾನ ಆಟಗಳು ಎರಡನ್ನೂ ಸಮನ್ವಯಗೊಳಿಸಿದ್ದಾಗಿದೆ. ಬಹುಶಃ ಈ ದೃಷ್ಟಿಯಲ್ಲಿ ಸುಬ್ಬನು ಯಕ್ಷಗಾನ ಇತಿಹಾಸದ ಮೊದಲ ದೊಡ್ಡ ನೂತನ ಪ್ರಯೋಗ (Experimental new Theatre Form) ವನ್ನು ರೂಪಿಸಿದವನು. ಹೀಗೆ ಒಂದು ಕಲಾಪ್ರಕಾರಕ್ಕೆ ತಮ್ಮ ಜೀವನವನ್ನೇ ಕೊಟ್ಟ 'ಕಲಾಬ್ರಹ್ಮ'ರು ಹಲವರಿದ್ದು ಅವರಿಂದಲೆ ಭಾರತದ ಕಲಾಸಾಹಿತ್ಯಗಳು ಇಂದು ನಮ್ಮ ಮುಂದಿವೆ. (ಉದಾ: ಅಂಖ್ಯಾನಾಟ್ಟದ ಸಂತ ಶ್ರೀಮತ್ ಶಂಕರದೇವ, ಕೃಷ್ಣನಾಟ್ಟಂನ ಕವಿ ಮಾನವೇದರಾಜ, ರಾಮನಾಟ್ಟಂನ ಕೊಟ್ಟಾರಕರ ವೀರಕೇರಳ ವರ್ಮ, ಭಾಗವತ ಮೇಳಂನ ವೆಂಕಟರಾಮ ಶಾಸ್ತ್ರಿ ಇತ್ಯಾದಿ). ಅಂತಹ ಓರ್ವ ಪುಣ್ಯಪುರುಷನಾದ ಸುಬ್ಬನು ತಾಯಿಯನ್ನು, ತಾಯ್ನುಡಿಯನ್ನು, ಕಲೆಯನ್ನು ಅಮರಗೊಳಿಸಿದವನು.

ಅವನ ಪ್ರಯೋಗದ ಅಸಾಧಾರಣ ಸೂಕ್ಷ್ಮತೆ ಗಮನಾರ್ಹ. ಕಥಕಳಿಯಲ್ಲಿ ಹೆಚ್ಚಿನ ಎಲ್ಲ ಬಗೆಯ ವೇಷಗಳಿಗೆ ಬಳಕೆ ಇರುವ ಬಟ್ಟಲು ಕಿರೀಟ(ತಟ್ಟೆ)ಗಳನ್ನು ರಾಕ್ಷಸವೇಷಗಳಿಗೆ ಸೀಮಿತಗೊಳಿಸಿದನು. ತರುಣ ಮತ್ತು ಕೆಲವು ಪ್ರೌಢ ವೇಷಗಳಿಗೆ ಪಗಡಿ (ಎಲೆಯಾಕಾರದ ಭೂಷಣ)ವನ್ನುಳಿಸಿಕೊಂಡನು. ಸೊಂಟದ ಕೆಳಗಿನ ನೆರಿ (ಬಾಲಮುಂಡು) ದೊಡ್ಡದಾಗಿಸಿ ಕಾಲ ಚೆಂಡು, ಜಂಗು, ಕಾಲ್ಮುಳ್ಳುಗಳಿಂದ ಭವ್ಯಗೊಳಿಸಿದನು. ರಾಜವೇಷಗಳಿಗೆ ಕೋಲುಕಿರೀಟಗಳನ್ನು ಹಾಗೆಯೆ ಉಳಿಸಿಕೊಂಡನು. ಬಣ್ಣಗಾರಿಕೆಯಲ್ಲಿ ವೈವಿಧ್ಯ ಮತ್ತು ಖಚಿತ ವ್ಯಾಕರಣವನ್ನು ನಿಯಮಿಸಿದನು(ಬಡಗುತಿಟ್ಟಿನಲ್ಲಿ ಈಗಲಾದರೂ ಮುಖವರ್ಣಿಕೆಗಳ ವೈವಿಧ್ಯ ಸೀಮಿತ. ಹಿಂದಕ್ಕೆ ಇನ್ನೂ ಕಡಮೆ ಇದ್ದಿತಂತೆ). ಕಥಕಳಿಯ ಗೋಡೆ ಚಿಟ್ಟಿ ಮತ್ತು ವಿವರವಾದ ಚಿತ್ರಾಭಿನಯ(ಪದ, ಪದ್ಯಗಳ ವಿವರವಾದ ಆಂಗಿಕಗಳು)ಗಳನ್ನು ತಾರದೆ, ಯಕ್ಷಗಾನದ ಹದವನ್ನು, ರಭಸ ಅಂದಗಳನ್ನು ಉಳಿಸಿಕೊಂಡನು. ಪೂರ್ವರಂಗ ಸಭಾಲಕ್ಷಣಪ್ರದರ್ಶನ ಭಾಗವನ್ನು ನಿಯಮಿಸಿದನು ಅಥವಾ ಪರಿಷ್ಕರಿಸಿದನು. ಹೀಗೆ ಬಹುವಿಧವಾಗಿ ಕಲಾರೂಪವೊಂದನ್ನು ಆವಿಷ್ಕರಿಸಿ, ಅದಕ್ಕೆ ಕೃತಿಗಳನ್ನಿತ್ತ ಸುಬ್ಬನು ಅಸಾಮಾನ್ಯನಾದ ಪ್ರತಿಭಾಶಾಲಿ ಮತ್ತು ಸಕ್ರಿಯನಾದ ಕಲಾ ರೂವಾರಿ.

**ಸುಬ್ರಹ್ಮಣ್ಯ ವಿಸ್ತಾರ**

ಸುಮಾರು ನಾಲ್ಕು ಶತಮಾನಗಳಿಂದ ಸತತ ಸಾವಿರಾರು, ಏಕೆ ಲಕ್ಷಾಂತರ ರಂಗಪ್ರದರ್ಶನಗಳನ್ನು ಕಂಡು ಸುಬ್ಬನ ಗೇಯಸಾಹಿತ್ಯಗಳು – ದೇಶದಲ್ಲೊಂದು ದಾಖಲೆ ಇದ್ದೀತು. ಅದನ್ನು ಆಧರಿಸಿ ಅಸಂಖ್ಯ ಕಲಾವಿದರು ಹಾಡು, ಅಭಿನಯ, ವಾದನ, ಮಾತುಗಳಿಂದ ಆಟ, ಕೂಟಗಳಲ್ಲಿ (ಸುಬ್ಬನ ಹೆಚ್ಚಿನ ಪ್ರಸಂಗಗಳು, ತಾಳಮದ್ದಲೆಗಳಲ್ಲೂ ಬಹು ಪ್ರಸಿದ್ಧ, ಯಶಸ್ವಿ. ಉದಾ: ಪಟ್ಟಾಭಿಷೇಕ, ಪಂಚವಟಿ, ವಾಲಿಸಂಹಾರ, ಚೂಡಾಮಣಿ, ವಿಭೀಷಣನೀತಿ (ಸೇತುಬಂಧನ), ಅಂಗಸಂಧಾನ ಇವುಗಳ ತಾಳಮದ್ದಲೆ ಅರ್ಥಗಾರಿಕೆ ಕಲಾನಂದಕಾರಿ ಮತ್ತು ಕಲಾನಿಕಷಗಳು)ಇಂತಹ ಪ್ರಸಂಗಗಳನ್ನು ತಮ್ಮ 'ಅಭಿನಯ'(ಹಾಡು, ಮಾತು, ವಾದನ, ಕುಣಿತ, ವೇಷ, ಭಾವಪ್ರಕಾಶ)ಗಳಿಂದ ಅಸಂಖ್ಯ ರೂಪದಿಂದ ವಿಸ್ತರಿಸಿದ ಕಲಾವಿದರೆಷ್ಟೋ! ಇಂತಹವರ ದಶರಥ, ಇಂತಹವರ ರಾವಣ, ಶೂರ್ಪನಖಿ, ಹನುಮಂತ, ವಾಲಿ, ವಿಭೀಷಣ, ಲವಕುಶರು, ಸೀತೆ, ವಾಲ್ಮೀಕಿ, –ಹೀಗೆ ಗುರುತಿಸಿದ ತಾರಾಮೌಲ್ಯಗಳೂ ಅಸಂಖ್ಯ. ಸುಬ್ಬ ಸುಬ್ರಹ್ಮಣ್ಯ ಜ್ಞಾನಶಕ್ತಿ ಕುಮಾರನ ಷಣ್ಮುಖ ವಿಸ್ತಾರ. ಅದೇ ಕವಿಯ ಆತ್ಮಕ್ಕೆ ಧನ್ಯತೆ.

ಈ ಸಂದರ್ಭದಲ್ಲಿ – ಅಂತಹ ಕಲಾವಿದರ ಪಂಕ್ತಿಯಲ್ಲಿ ನಮ್ಮ ಕಾಲದ ಅನೇಕ ವೇಷಧಾರಿಗಳು, ಮಾತುಗಾರರು, ಭಾಗವತರು ನೆನಪಿಗೆ ಬರುತ್ತಾರೆ. ಸುಬ್ಬನ ಪದ್ಯಗಳಿಗೆ

– ಅಸಾಧಾರಣವಾದ ವಿಸ್ಮಯಕರವಾದ ‘ಅರ್ಥ’ವನ್ನು ಹೇಳಿದ ವಾಕ್ಕವಿ ಕಾಸರಗೋಡಿನ ಶೇಣಿಯವರನ್ನು ಮತ್ತು ಪಾರ್ತಿಸುಬ್ಬನ ಎಲ್ಲ ಪ್ರಸಂಗಗಳ ಹಾಡುವಿಕೆಯ ಪೂರ್ಣತಜ್ಞರಾದ ಮಹಾ ಉಭಯ ಭಾಗವತರಾದ ಬಲಿಪ ಭಾಗವತರನ್ನು ಸ್ಮರಿಸುತ್ತೇನೆ.

**ಸುಬ್ಬನ ಎಚ್ಚರಿಕೆ**

ಈ ಸಂದರ್ಭದಲ್ಲಿ ವರ್ತಮಾನದ ಕಲಾಸನ್ನಿವೇಶಕ್ಕೆ ಸಂಬಂಧಿಸಿ ಸುಬ್ಬನ ಮಂಡೋದರಿಯ ನೀತಿಮಾತನ್ನು (ಸೀತಾಪಹರಣ ಪ್ರಸಂಗ) ಜ್ಞಾಪಿಸಬಹುದು. ಕಲೆ ವಿಸ್ತಾರವಾಗಿ ಬೆಳೆದಿದ್ದು ಸಂಖ್ಯೆ ಗುಣಗಳಲ್ಲೂ ವರ್ಧಿಸಿದೆ. ಆದರೆ, ವಿವಿಧ ಪ್ರಭಾವಗಳಿಂದ ತೆಳುವಾದ ಕಲ್ಪನೆಗಳಿಂದ, ಕಲೆಯ ರೂಪ ಮತ್ತು ಪ್ರದರ್ಶನಗಳ ಸಂಬಂಧದ ಅರಿವಿಲ್ಲದುದರಿಂದ ಯಕ್ಷಗಾನದ ಬುಡವು ಅಲ್ಲಾಡುತ್ತಿದೆ. ಜನಪ್ರಿಯ ಕಲಸು–ಕಲೆಯತ್ತ ಹೋಗುತ್ತಿದೆ.ಈ ಕಾಲದ ನಾವೆಲ್ಲ ಚಿಂತಿಸಬೇಕಾದ ಸುಬ್ಬನ ಮಾತು ಕಲೆಗೂ ಅನ್ವಯವೇ.

**– ಬೇರು ಕಡಿದ ಮೇಲೆ ವೃಕ್ಷ ಜಾರದೆ ನಿಲ್ಲುವುದುಂಟೆ?**
**– ಎಳ್ಳಿನಷ್ಟು ಕಿಚ್ಚು ಮನೆಗಳಲ್ಲಿ ಸುಡದೆ ನಿಲುವುದುಂಟೆ?**

**॥ ಶ್ರೀಕಣ್ವಪುರ ಗೋಪಾಲಕೃಷ್ಣಾರ್ಪಣಂ ॥**

**ಅನುಬಂಧ**

೧. ಯಕ್ಷಗಾನ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಸೂಕ್ತ ಮಾನ್ಯತೆ ಸಿಕ್ಕಲಿಲ್ಲವೆಂಬ ಮಾತು ಹಲವು ವರ್ಷಗಳಿಂದ ಕೇಳುತ್ತಿದೆ. ಈ ಬಗ್ಗೆ ನನ್ನ ಅನಿಸಿಕೆಯೆಂದರೆ – ಸಾಹಿತ್ಯದಲ್ಲಿ ಸ್ಥಾನ, ಕವಿಗಳಿಗೆ, ಅರ್ಥಸಾಹಿತ್ಯದ ಮೌಲ್ಯಮಾಪನಾದಿ ವಿಷಯ – ಇವೆಲ್ಲ ಯಾರೂ ಕೊಡುವುದಲ್ಲ. ಕೊಡಲು ಯಾರು? ಯಾರಿಗೆ? ಏನು? ಇದ್ದರೆ ಇರಲಿ. ಯಾರೋ ಒಪ್ಪಿ ಏನಾಗಬೇಕು?

**ಟಿಪ್ಪಣಿಗಳು**

೧. ಈ ಕುರಿತಾಗಿ ಡಾ. ಪಾದೇಕಲ್ಲು ವಿಷ್ಣು ಭಟ್ಟರ ಅಭಿಮತ
ಯಕ್ಷಗಾನ ಪ್ರಸಂಗಗಳಿಗೆ ಕನ್ನಡ ಕವಿಚರಿತ್ರೆಯಲ್ಲಿ ರಾ. ನರಸಿಂಹಾಚಾರ್ಯರು ಸ್ಥಾನ ನೀಡಿ ಕೆಲವು ಕೃತಿಗಳನ್ನು ದಾಖಲಿಸಿದ್ದಾರೆ. ಮುಂದೆ ಪ್ರೊ. ರಂ. ಶ್ರೀ. ಮುಗಳಿಯವರ ಸಾಹಿತ್ಯ ಚರಿತ್ರೆಯಲ್ಲಿ ಉದ್ದೇಶಪೂರ್ವಕವೆಂಬಂತೆ ಯಕ್ಷಗಾನ ಸಾಹಿತ್ಯವನ್ನು ಹೊರಗಿಟ್ಟಿದೆ. ಇದು ಯಾರೂ ಸ್ಥಾನ ಕೊಡುವ ಪ್ರಶ್ನೆಯಲ್ಲ.

ಕನ್ನಡ ಸಾಹಿತ್ಯದ ಅಧ್ಯಯನದ ವಿಚಾರ – ಯಕ್ಷಗಾನದ ಪದ್ಯ ಭಾಷೆ, ಮೊದಲಾದ ಅಂಶಗಳನ್ನು ಪರಿಗಣಿಸದಿದ್ದರೆ ಅಷ್ಟರಮಟ್ಟಿಗೆ ಕನ್ನಡದ ಅಧ್ಯಯನ ಅಸಮಗ್ರವಾಗುತ್ತದೆ.

– ಯಕ್ಷಗಾನಾಧ್ಯಯನ, ಡಾ. ಪಾದೇಕಲ್ಲು ವಿಷ್ಣು ಭಟ್ಟ, ಪುಟ ೨, ೩೫, ೪೩, ೪೪, ೮೭

***

೨. ಪಾರ್ತಿಸುಬ್ಬನ ಕುರಿತಾದ ಉಲ್ಲೇಖ, ಸಂಶೋಧನ, ವಿವಾದಗಳ ಬಗೆಗೆ ಪ್ರೊ. ಅಮೃತ ಸೋಮೇಶ್ವರರು ಬರೆದ ಲೇಖನ – "ಪಾರ್ತಿಸುಬ್ಬ ಮತ್ತು ಹಿರಿಯ ಸಂಶೋಧಕರು" (ಯಕ್ಷತರು, ಲೇಖನ ಸಂಕಲನ, ಯಕ್ಷಗಾನ ಅಧ್ಯಯನ ಕೇಂದ್ರ ಮಂಗಳುರು ವಿಶ್ವವಿದ್ಯಾಲಯ, ೨೦೧೩) – ವಿಶಿಷ್ಟವಾದ ಬರಹ. ಇದರಲ್ಲಿ ಸುಬ್ಬನ ಕುರಿತಾದ ಉಲ್ಲೇಖ, ಕಾಲದೇಶಾದಿಗಳ ಕುರಿತಾಗಿ, ಸಂಗ್ರಹವಾಗಿ ಉಲ್ಲೇಖಿಸಿದ್ದು, ಜತೆಗೆ ಕಾಲಕಾಲಕ್ಕೆ ಸಂಶೋಧಕರು ಮಾಡಿದ ಪ್ರಮಾದಗಳು, ಅನವಧಾನಗಳನ್ನು ದಾಖಲಿಸಿದ್ದಾರೆ. ಮಾತ್ರವಲ್ಲ ಉದ್ದೇಶಪೂರ್ವಕವೆಂದು ಖಚಿತವಾಗಿ ಕಾಣುವ, ಕೃತಕ ಪಾಠಗಳು, ಅಪಪಾಠಗಳು, ಆಧಾರವಿಲ್ಲದ ಪ್ರತಿಪಾದನೆಗಳು, ತಮ್ಮ ರಚನೆಗಳನ್ನು ಆಧಾರವಾಗಿ ತೋರಿಸಿದ್ದು – ಮೊದಲಾದುವನ್ನು ನಿರ್ದಾಕ್ಷಿಣ್ಯವಾಗಿ ಸ್ಪಷ್ಟವಾಗಿ ಖಂಡಿಸಿದ್ದಾರೆ. ಈ ಬಗೆಯ ಅಧ್ಯಾಪನ ಸಂಶೋದನೆಗಳಿಗೆ ಎಚ್ಚರಿಗೆ ನೀಡುವ, ಮಾರ್ಗದರ್ಶಿ ಲೇಖನ ಇದಾಗಿದೆ.

***

೩. ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯಚರಿತ್ರೆ ಸಂ. ೫ ಭಾಗ ೧ರಲ್ಲಿ ಮತ್ತು ಡಾ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರು ಬರೆದಿರುವ ಕನ್ನಡ ಸಾಹಿತ್ಯ ಚರಿತ್ರೆ – ಪ್ರಾಚೀನ ಆಧುನಿಕ(ಸಪ್ನಾ ಬುಕ್ ಹೌಸ್)ದಲ್ಲಿ ಯಕ್ಷಗಾನ ಸಾಹಿತ್ಯದ ಬಗೆಗೆ ಒಂದು ಅಧ್ಯಾಯವಿದೆ.

***

# ಗೋಷ್ಠಿ – ೧

## ಪಾರ್ತಿಸುಬ್ಬನ ಕಾಲ
## ಹಾಗೂ ಕರ್ತೃತ್ವ ಚರ್ಚೆಗಳು

## ಮತ್ತು

## ಪಾರ್ತಿಸುಬ್ಬನ ಬಗೆಗಿನ ಅಧ್ಯಯನಗಳು
## ಹಾಗೂ ಕೃತಿ ಪ್ರಕಟಣೆಗಳು

# ಗೋಷ್ಠಿ – ೧

## ಪಾರ್ತಿಸುಬ್ಬನ ಕಾಲ ಹಾಗೂ ಕರ್ತೃತ್ವ ಚರ್ಚೆಗಳು (ಸು. ೧೫೬೦ ರಿಂದ ೧೬೩೦)

**– ಡಾ. ಪಾದೇಕಲ್ಲು ವಿಷ್ಣು ಭಟ್ಟ**

'ಯಕ್ಷಗಾನ ವಾಲ್ಮೀಕಿ'ಯೆಂದು ನಮ್ಮ ಕರಾವಳಿಯ ಕನ್ನಡ ಪರಿಸರದಲ್ಲಿ ಕೀರ್ತಿತನಾದ ಪಾರ್ತಿಸುಬ್ಬನು ಯಕ್ಷಗಾನಾಸಕ್ತರಾದ ವಿದ್ವಾಂಸರ ನಡುವೆ ತೀವ್ರವಾದ ಭಿನ್ನಾಭಿಪ್ರಾಯಗಳನ್ನೂ ವಾದವಿವಾದಗಳನ್ನೂ ಹುಟ್ಟುಹಾಕಿದ ವ್ಯಕ್ತಿಯಾಗಿ ಪರಿಣಮಿಸಿದ್ದಾನೆ. ಅವನ ಹೆಸರೇ ಸಮಸ್ಯೆಗಳ ಗೂಡಾಗಿ ಪರಿಣಮಿಸಿದೆ. ಇಪ್ಪತ್ತನೆಯ ಶತಮಾನದ ಮಧ್ಯಭಾಗದವರೆಗೆ ಕವಿಗಳ ಕಾಲನಿರ್ಣಯವೆಂಬುದು ಸಾಹಿತ್ಯ ಕ್ಷೇತ್ರದ ಸಂಶೋಧನೆಯಲ್ಲಿ ಅತ್ಯಂತ ಪ್ರಮುಖವಾದ ಒಂದು ಸ್ಥಾನವನ್ನು ಪಡೆದಿತ್ತು. ಕಾಲವು ವಿವಾದಾಸ್ಪದವಾಗಿ ಪರಿಣಮಿಸಿದ ಹಲವು ಕವಿಗಳ ಬಗೆಗೆ ವಿದ್ವಾಂಸರು ವಿವಿಧ ರೀತಿಯ ಸಂಶೋಧನೆಗಳನ್ನು ಮಾಡಿ ಲೇಖನ–ಪ್ರತಿಲೇಖನಗಳನ್ನು ಬರೆದು ಅಭಿಪ್ರಾಯ ನಿರೂಪಣೆ–ಖಂಡನೆ–ಪ್ರತಿಖಂಡನೆ–ಸಮರ್ಥನೆಗಳನ್ನು ಮಾಡುತ್ತಿದ್ದರು. ಹೀಗೆ ಅತಿಯಾಗಿ ಚರ್ಚಿತರಾಗುವ ಅವಕಾಶ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಯ ಕ್ಷೇತ್ರದಲ್ಲಿ ಕೆಲವೇ ಕವಿಗಳಿಗೆ ಸಿಕ್ಕಿದುದಾಗಿದೆ. ಯಕ್ಷಗಾನ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕ್ರಮಪ್ರಕಾರವಾಗಿ ಇನ್ನೂ ಸೇರಿಸಿಕೊಳ್ಳಲಿಲ್ಲವೆಂಬ ಆಕ್ಷೇಪ ರೂಪದ ಅಭಿಪ್ರಾಯವಿದ್ದರೂ ಯಕ್ಷಗಾನ ಕವಿ ಪಾರ್ತಿಸುಬ್ಬನ ಬಗೆಗೆ ಪ್ರಾಯಶಃ ಇತರ ಅನೇಕ ಕನ್ನಡ ಕವಿಗಳಿಗಿಂತಲೂ ಹೆಚ್ಚಾಗಿ ಚರ್ಚೆ ನಡೆದಿದೆ. ಚರ್ಚೆಯ ರೀತಿಗಳು ಕೆಲವು ಬಾರಿ ವಿದ್ವಾಂಸರು ಚರ್ಚಿಸಿಕೊಳ್ಳುವ ಸಂಭಾವಿತ ಕ್ರಮಗಳನ್ನು ಮೀರಿ ವೈಯಕ್ತಿಕ ಟೀಕೆ ನಿಂದೆಯವರೆಗೂ ಮುಂದುವರಿದಿವೆ. ಪಾರ್ತಿಸುಬ್ಬನ ಬಗೆಗೆ ಇದುವರೆಗೆ ಎಲ್ಲರೂ ಬರೆದ ಲೇಖನಗಳನ್ನು ಒಟ್ಟು ಹಾಕಿದರೆ ಆತನ ಎಲ್ಲ ಕೃತಿಗಳನ್ನು ಒಟ್ಟು ಸೇರಿಸಿದ ಗ್ರಂಥಕ್ಕಿಂತ ಎಷ್ಟೋ ಪಾಲು ದೊಡ್ಡ ಗಾತ್ರದ ಗ್ರಂಥವಾಗಬಹುದೇನೋ!

೧೯೪೫ರಲ್ಲಿ ದಿವಂಗತ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು 'ಪಾರ್ತಿಸುಬ್ಬ' ಎಂಬ ಗ್ರಂಥವನ್ನು ಬರೆದು ಅದರ ಮೊದಲ ಭಾಗದಲ್ಲಿ ಕವಿ ಪಾರ್ತಿಸುಬ್ಬನ ಬಗೆಗೂ

ಯಕ್ಷಗಾನದ ಮೂಲ ಮತ್ತು ಬೆಳವಣಿಗೆಗಳ ಬಗೆಗೂ ಎರಡನೆಯ 'ಪ್ರಬಂಧಸಾರ' ಎಂಬ ಭಾಗದಲ್ಲಿ ಪಾರ್ತಿಸುಬ್ಬನ ಕೃತಿಗಳ ಬಗೆಗೂ ಬರೆದು ಆ ಮೂಲಕ ಆತನ ಸಾಹಿತ್ಯ ವೈಶಿಷ್ಟ್ಯವನ್ನು ವಿದ್ವಾಂಸರ ಗಮನಕ್ಕೆ ತಂದರು.[೧] ಎಷ್ಟೇ ಕುಂದುಕೊರತೆಗಳಿದ್ದರೂ ಯಕ್ಷಗಾನದ ಬಗೆಗೆ ಸರಿಯಾದ ಪರಿಚಯವನ್ನು ಕೊಡಲು ಪ್ರಯತ್ನಿಸಿದ ಗ್ರಂಥಗಳಲ್ಲಿ ಇದೇ ಮೊದಲಿನದು. ಅಂದಿನ ವಿಶಾಲ ದಕ್ಷಿಣ ಕನ್ನಡದ ಹೊರಗಿನ ಕನ್ನಡಿಗರಿಗೆ ಯಕ್ಷಗಾನದ ಮತ್ತು ಪ್ರಸಂಗ ಸಾಹಿತ್ಯದ ಪರಿಚಯ ಮೊತ್ತ ಮೊದಲಿಗೆ ವಿವರವಾಗಿ ಆದುದು ಈ ಗ್ರಂಥದಿಂದಲೇ ಎನ್ನಬೇಕು. ಯಕ್ಷಗಾನದ ಅತಿಮುಖ್ಯ ಕವಿಯೊಬ್ಬನ ಸಮಗ್ರ ಪರಿಚಯ-ವಿವೇಚನೆಗಳನ್ನು ಮೊದಲ ಬಾರಿಗೆ ನೀಡಿದ ಕಾರಣದಿಂದಲೂ ಯಕ್ಷಗಾನ ಕ್ಷೇತ್ರದಲ್ಲಿ ಅನಂತರದ ಹಲವಾರು ಸಂಶೋಧನೆಗಳಿಗೆ ಬೀಜಾವಾಪ ಮಾಡಿದುದೆಂಬ ಕಾರಣದಿಂದಲೂ ಪಾರ್ತಿಸುಬ್ಬನ ಬಗೆಗಿನ ಎಲ್ಲ ಚರ್ಚೆ ಸಂಶೋಧನೆಗಳಿಗೆ ಮೂಲ ಹೇತುವಾಗಿ ಪರಿಣಮಿಸಿದುದೆಂಬ ಕಾರಣದಿಂದಲೂ ಈ ಗ್ರಂಥಕ್ಕೆ ಐತಿಹಾಸಿಕವಾದ ಪ್ರಾಮುಖ್ಯವಿದೆ.[೨]

ಪಾರ್ತಿಸುಬ್ಬನ ಕಾಲವನ್ನು ಅಂತಿಮವಾಗಿ ಹೀಗೆ ನಿರ್ಣಯಿಸುತ್ತಿರುವಾಗಲೂ ಪಾರ್ತಿಸುಬ್ಬನ ಕಾಲನಿರ್ಣಯದ ಬಗೆಗಿನ ಚರ್ಚೆ ಈ ಹಿಂದೆ ದಾರಿತಪ್ಪಿದುದನ್ನು, ತಾವೂ ತಪ್ಪಾಗಿ ಕಾಲನಿರ್ಣಯ ಮಾಡಿದುದನ್ನು ಐತಿಹಾಸಿಕ ವಿದ್ಯಮಾನಗಳೆಂಬಂತೆ ಪ್ರಾಮಾಣಿಕವಾಗಿ ಸ್ಪಷ್ಟವಾಗಿ ಒಪ್ಪಿಕೊಂಡು ಕುಕ್ಕಿಲ ಕೃಷ್ಣ ಭಟ್ಟರು ಮುಂದುವರಿಯಬೇಕಿತ್ತು. ಕಾರಂತರು ತಮ್ಮ 'ಯಕ್ಷಗಾನ ಬಯಲಾಟ'ದ ಮೊಲದ ಮುದ್ರಣದಲ್ಲಿ ಮಾಡಿದ ಹಸ್ತಪ್ರತಿಗಳ ಕಾಲನಿರ್ಣಯ ತಪ್ಪಾಗಿತ್ತೆಂಬುದನ್ನು ಎರಡನೇ ಮುದ್ರಣದಲ್ಲಿ ಒಪ್ಪಿಕೊಂಡಿದ್ದಾರೆ. ಆದರೆ ಕುಕ್ಕಿಲ ಕೃಷ್ಣಭಟ್ಟರು 'ಮೊಲದ ಪಾರ್ತಿಸುಬ್ಬನ ಕಾಲನಿರ್ಣಯಕ್ಕೆ

---

೧. ಮುಳಿಯ ತಿಮ್ಮಪ್ಪಯ್ಯ, ಪಾರ್ತಿಸುಬ್ಬ, ೧೯೪೫, ಬಾಳಿಗಾ ಎಂಡ್ ಸನ್ಸ್ ಮಂಗಳೂರು. ಈ ಕೃತಿಯು ಎರಡು ಬಾರಿ ಪುನರ್ಮುದ್ರಣಗೊಂಡಿದೆ. ಮುಳಿಯ ತಿಮ್ಮಪ್ಪಯ್ಯ ಸಮಗ್ರ ಸಾಹಿತ್ಯ ಸಂಪುಟ-೨, ೧೯೯೭, ಮುಳಿಯ ತಿಮ್ಮಪ್ಪಯ್ಯ ಜನ್ಮಶತಮಾನೋತ್ಸವ ಸಮಿತಿ, ಮಂಗಳೂರು – ಇದರಲ್ಲಿ ಈ ಕೃತಿ ಸೇರಿದೆ. ಕುಕ್ಕಿಲ ಕೃಷ್ಣ ಭಟ್ಟರು ಸಂಪಾದಿಸಿದ (೧೯೭೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು) ಪಾರ್ತಿಸುಬ್ಬನ ಯಕ್ಷಗಾನಗಳು ಪುನರ್ಮುದ್ರಣ, ೨೦೦೯, ಡಾ. ಕೀಲಾರು ಗೋಪಾಲಕೃಷ್ಣಯ್ಯ ಪ್ರತಿಷ್ಠಾನ, ಸಂಪಾಜೆ, ದ.ಕ. – ಇದರಲ್ಲಿಯೂ ಮತ್ತೊಮ್ಮೆ ಮುದ್ರಣಗೊಂಡಿದೆ.

೨. ಈ ಅಭಿಪ್ರಾಯವನ್ನು ಶಿವರಾಮ ಕಾರಂತರು ಸ್ವಲ್ಪ ಟೀಕಾರೂಪದಲ್ಲಿಯೇ ಉಲ್ಲೇಖಿಸಿದ್ದಾರೆ. "ದಕ್ಷಿಣ ಕನ್ನಡ ಜಿಲ್ಲೆಯ ಕುಂಬಳೆ ಸೀಮೆಯ ಪಾರ್ತಿಸುಬ್ಬನೆಂಬವನೇ ಅವುಗಳ ಕವಿ ಎಂಬುದಾಗಿ ಪ್ರಥಮದಲ್ಲಿ ದಿ. ಮುಳಿಯ ತಿಮ್ಮಪ್ಪಯ್ಯನವರು ಒಂದು ಗ್ರಂಥವನ್ನೇ ಬರೆದು ತಿಳಿಸಿದರು. ಆ ತನಕ ಯಾವ ಯಕ್ಷಗಾನ ಕವಿಯನ್ನೂ ಯಾರೂ ತಲೆಯ ಮೇಲೆ ಎತ್ತಿ ಹಿಡಿದವರಿಲ್ಲ." ಶಿವರಾಮ ಕಾರಂತ ಯಕ್ಷಗಾನ ಬಯಲಾಟ ಪು.೨೦೯. ಪಂಪನ ನಂತರ ಕವಿಯ ಬಗೆಗೆ ಆಳವಾಗಿ ಅಧ್ಯಯನ ನಡೆಸಿ 'ಹಳಗನ್ನಡಕ್ಕೆ ಇವರನ್ನು ಬಿಟ್ಟರೆ ಬೇರಿಲ್ಲ' ಎಂಬ ಹಿರಿಮೆಯನ್ನು ಗಳಿಸಿದ.

ಪ್ರಾಮಾಣಿಕ ಆಧಾರ ದೊರೆಯದಿದ್ದುದರಿಂದ ಈಗ ಸು.೧೫೦ ವರ್ಷಕ್ಕೆ ಹಿಂದೆ ಆ ಕಣಿಪುರದಲ್ಲಿದ್ದ ಅದೇ ಹೆಸರಿನ ಇನ್ನೊಬ್ಬ ವ್ಯಕ್ತಿಯೇ ಈತನೆಂಬ ತಪ್ಪು ತಿಳುವಳಿಕೆ ಸಾಕಷ್ಟು ಹಿಂದಿನಿಂದಲೇ ರೂಢಮೂಲವಾಗಿತ್ತು"[೧೧] ಎಂದು ಹೇಳಿ ಬಿಟ್ಟುಬಿಟ್ಟಿದ್ದಾರೆ. ಪಾರ್ತಿಸುಬ್ಬನೇ ಯಕ್ಷಗಾನವೆಂಬ ರಂಗಪ್ರಯೋಗದ ಪದ್ಧತಿಯನ್ನು ತೊಡಗಿದವನೆಂಬ ಮಾತನ್ನು ಸ್ಥಿರವಾಗಿ ಹಿಡಿದುಕೊಂಡು ಅವನ ತಪ್ಪಾದ ಕಾಲನಿರ್ಣಯದ ಆಧಾರದಿಂದ ಸು.೧೮೦೦ಕ್ಕಿಂತ ಹಿಂದೆ ಯಕ್ಷಗಾನವೇ ಇರಲಿಲ್ಲವೆಂಬು ಸಾಧಿಸತೊಡಗಿದುದು ಕಾರಂತರನ್ನು ಆಕ್ಷೇಪಿಸಿದ ಪಾತಿಸುಬ್ಬವಾದಿಗಳು ಮಾಡಿದ ತಪ್ಪಾಗಿದೆ.

೧೯೭೫ರಲ್ಲಿ ಕುಕ್ಕಿಲ ಕೃಷ್ಣಭಟ್ಟರ 'ಪಾರ್ತಿಸುಬ್ಬನ ಯಕ್ಷಗಾನಗಳು' ಕೃತಿ ಬಂದ ಮೇಲೆ ಅವನ ಬಗೆಗೆ ವಿಶೇಷ ಚರ್ಚೆ ನಡೆದುದು ಕಂಡುಬರುವುದಿಲ್ಲ. ಸದ್ಯಕ್ಕೆ ಅದರಲ್ಲಿ ಹೇಳಲಾದ ವಿಷಯಗಳೇ ಕೊನೆಯ ನಿರ್ಣಯಗಳೆನ್ನಬಹುದು. ಐರಾವತ ಪ್ರಸಂಗದಲ್ಲಿ ಹೇಳಲಾದ ಗಜಗೌರೀವ್ರತ ಸಂಕಲ್ಪದ ಕಾಲವು ಪಾರ್ತಿಸುಬ್ಬನ ಕಾಲವನ್ನು ಸೂಚಿಸಲು ನಿರ್ಧಾರಕವಾದ ಸಾಕ್ಷ್ಯವಲ್ಲವೆಂದು ಸಿದ್ಧವಾಗುವವರೆಗೆ ಈ ಕಾಲನಿರ್ಣಯದ್ಲಿ ವ್ಯತ್ಯಾಸವಾಗದು.[೧೨]

---

೧೧. ಕುಕ್ಕಿಲ ಕೃಷ್ಣಭಟ್ಟ ಪಾರ್ತಿಸುಬ್ಬನ ಯಕ್ಷಗಾನಗಳು ಪೂರ್ವೋಕ್ತ ಪು.೫೦. ತಾವು ಈ ಪೀಠಿಕೆಯನ್ನು ಸರ್ವಗ್ರಾಹಿಯಾಗುವಂತೆ ದೀರ್ಘವಾಗಿ ಬರೆದುದಾಗಿಯೂ ಆಗ ಅದು ಸುಮಾರು ೧೫೦ ಪುಟಗಳಷ್ಟು ದೀರ್ಘವಾಗಿ ಪರಿಣಮಿಸಿದುದಾಗಿಯೂ ಈ ಪುಸ್ತಕದೊಂದಿಗೆ ೫೦ ಪುಟಗಳೊಳಗೆ ಪೀಠಿಕೆ ಬರೆದುಕೊಡಬೇಕೆಂದು ಪ್ರಕಾಶಕರ ನೆಲೆಯಲ್ಲಿ ಡಾ॥ ಹಾ.ಮಾ.ನಾಯಕರು ಹೇಳಿದುದರಿಂದ ಪೀಠಿಕೆಯನ್ನು ಹ್ರಸ್ವಗೊಳಿಸಬೇಕಾಗಿ ಬಂತೆಂದೂ ಕುಕ್ಕಿಲ ಕೃಷ್ಣಭಟ್ಟರು ನನ್ನಲ್ಲಿ ಹೇಳಿದ್ದುಂಟು. (೧೯೮೧ರಲ್ಲಿ ಕುಕ್ಕಿಲ ಕೃಷ್ಣಭಟ್ಟರನ್ನು ಅವರ ಮನೆಯಲ್ಲಿ ಭೇಟಿಯಾಗಿದ್ದಾಗ ಅವರು ಹೇಳಿದ ವಿಷಯ) ಈಗ ಇರುವ ಪೀಠಿಕೆ ೬೧ ಪುಟಗಳಷ್ಟಿದೆ.

೧೨. ಪಾರ್ತಿಸುಬ್ಬನ ವಿವಾದದಲ್ಲಿ ಬೇಕಾದಷ್ಟು ಲೇಖನಗಳು ಪ್ರಕಟಗೊಂಡಿವೆಯಾದರೂ ಈ ಚರ್ಚೆಯ ಕೂಲಂಕಶವಾದ ಅರಿವಿಗೆ ಈ ಮುಂದೆ ಬರೆದ ಕೃತಿಗಳನ್ನೂ ಲೇಖನಗಳನ್ನೂ ಮುಖ್ಯವಾಗಿ ನೋಡಿದರೆ ಸಾಕಾಗುವುದು. ಅವು ಇಂತಿವೆ – (೧) ಮುಳಿಯ ತಿಮ್ಮಪ್ಪಯ್ಯ ಪಾರ್ತಿಸುಬ್ಬ– ೧೯೪೫, (೨) ಶಿವರಾಮ ಕಾರಂತ ಯಕ್ಷಗಾನ ಬಯಲಾಟ – ೧೯೫೭ ಮತ್ತು ೧೯೬೩ (೩) ಕುಕ್ಕಿಲ ಕೃಷ್ಣಭಟ್ಟ ಕುಂಬಳೆ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವ ನಿರ್ಣಯ–೧೯೬೧ (೪) ಅಮೃತ ಸೋಮೇಶ್ವರ ವೆಂಕಣಾರ್ಯನ ಮಗ ಸುಬ್ಬನು ಬ್ರಹ್ಮಾವರದವನಲ್ಲ ರಾಷ್ಟ್ರಮತ ವಿಶೇಷ ಸಂಚಿಕೆ – ೧೯೬೦–೬೧ (೫೦ ಕುಕ್ಕಿಲ ಕೃಷ್ಣ ಭಟ್ಟ ಶ್ರೀ ಕೋಟ ಶಿವರಾಮ ಕಾರಂತರ ಸುಬ್ಬನ ಸಮಸ್ಯೆ ಮಧುಪುರ ಸಂ. ಕೆ.ವೆಂಕಟಕೃಷ್ಣಯ್ಯ–೧೯೬೨, (೬) ಬೈಕಾರಿ ವೆಂಕಟಕೃಷ್ಣರಾಯ (ಸಂ) ನಮ್ಮ ಅಜಪುರ, (೭) ಸಿರಿಬಾಗಿಲು ವೆಂಕಪ್ಪಯ್ಯ ಯಕ್ಷಗಾನ ಕವಿ ಸುಬ್ಬನ ಸಮಸ್ಯೆ ಮಧುರಸ್ಮೃತಿ ಮಧೂರು ಕೋಟಿನಾಮಾರ್ಚನೆ ಸ್ಮೃತಿ ಸಂಚಿಕೆ–೧೯೬೫, (೮) ಕುಕ್ಕಿಲ ಕೃಷ್ಣಭಟ್ಟ ಪಾರ್ತಿಸುಬ್ಬನ ಯಕ್ಷಗಾನಗಳು–೧೯೭೫.

ಸುಬ್ಬ ತನ್ನ ಹೆಸರನ್ನು ಎಲ್ಲಿಯೂ ಪ್ರಸಂಗಗಳಲ್ಲಿ ಹೇಳಲಿಲ್ಲ. ಪಟ್ಟಾಭಿಷೇಕದಲ್ಲಿ ಮಾತ್ರ ಇದೊಂದು ಪದ್ಯವಿದೆ.

**ಧಾತ್ರೀಗುತ್ತಮ ಕಣ್ವನಾಮ ಪುರದೀ ನಿಂತಿರ್ದ ಶ್ರೀಕೃಷ್ಣನಾ**
**ತತ್ಪಾದಾಂಬುಜ ದಿವ್ಯನಾಮ ವರದಂದೀ ಪಾರ್ವತೀನಂದನಂ ।**
**ಬತ್ತೀಸಾಕೃತಿ ರಾಗತಾಲಳವಿಧದಿಂ ರಾಮಾಯಣಂ ಪೇಳ್ವುದಾ**
**ಭಕ್ತಿಧ್ಯಾನದಿ ಕೇಳ್ದು ಪುಣ್ಯಕಥೆಯಂ ಸಂತೋಷಮಂ ಮಾಳ್ಪುದು॥**

**ಎಲ್ಲ ಪ್ರಸಂಗಗಳಲ್ಲೂ ಕಣ್ವಪುರ ಕೃಷ್ಣನ ಸ್ಮರಣೆಯಿದೆ–**
**ಕಂತುಜನಕನ ಚರಿತೆ ಇದನು ಕೇಳ್ದವರಿಗ**
**ತ್ಯಂತ ಸೌಖ್ಯವನಿತ್ತು ಧರೆಯೊಳನವರತ ನಿ**
**ಶ್ಚಿಂತೆಯಲಿ ಸಲಹುವನು ಕಣ್ವಪುರದೊಡೆಯ ಶ್ರೀಕೃಷ್ಣ ಕಟಾಕ್ಷದಿಂದ॥**
**– ಪುತ್ರಕಾಮೇಷ್ಟಿ – ಸೀತಾಕಲ್ಯಾಣ**

ಈ ವಾದ – ವಿವಾದಗಳನ್ನೆಲ್ಲಾ ದೂರ ನಿಂತು ಗಮನಿಸಿದಾಗ ವ್ಯಕ್ತವಾಗುವ ಅಂಶಗಳಿವು–

೧. ಯಕ್ಷಗಾನ ರಾಮಾಯಣ ಪ್ರಸಂಗಗಳು ಯಕ್ಷಗಾನ ಸಾಹಿತ್ಯದಲ್ಲಿ ಉತ್ಕೃಷ್ಟವಾದ ರಚನೆಗಳೇ ಹೌದು.
೨. ಈ ಪ್ರಸಂಗಗಳ ಕರ್ತೃ ಪ್ರತಿಭಾವಂತನೂ ಯಕ್ಷಗಾನ ಕಲೆಯ ಎಲ್ಲ ಅಂಗಗಳನ್ನೂ, ಯಕ್ಷಗಾನದ ರಂಗತಂತ್ರಗಳನ್ನೂ ಚೆನ್ನಾಗಿ ಬಲ್ಲವನೇ ಹೌದು.
೩. ಯಕ್ಷಗಾನ ರಾಮಾಯಣ ಪ್ರಸಂಗಗಳ ಕವಿಯ ಕಾವ್ಯ ಸ್ವಾರಸ್ಯವನ್ನು ಚೆನ್ನಾಗಿಯೇ ವಿವರಿಸಿದರೂ ಕವಿಯ ಕಾಲ ನಿರ್ಣಯದಲ್ಲಿ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ತಪ್ಪಿ ಬಿದ್ದಿದ್ದಾರೆ.
೪. ಕುಕ್ಕಿಲ ಕೃಷ್ಣಭಟ್ಟರು ತೋರಿಸಿರುವಂತೆ ಯಕ್ಷಗಾನ ರಾಮಾಯಣ ಪ್ರಸಂಗಗಳಿಗೂ, ಕಥಕಳಿ ರಾಮಾಯಣಕ್ಕೂ ನಿಕಟ ಸಾಮ್ಯವಿರುವುದು ಹೌದು.
೫. ಪಾರ್ತಿಸುಬ್ಬನೇ ಯಕ್ಷಗಾನವನ್ನು ಮೊದಲಾಗಿ ತೊಡಗಿದವನೆಂಬ ಪ್ರತೀತಿಯನ್ನು ಬಲವಾಗಿ ನಂಬಿದುದರಿಂದ ಮತ್ತು ಮುಳಿಯ ತಿಮ್ಮಪ್ಪಯ್ಯನವರು ಊಹಿಸಿದ ಕಾಲವನ್ನೇ ಸರಿಯೆಂದು ಸಮರ್ಥಿಸತೊಡಗಿದುದರಿಂದ ಕುಕ್ಕಿಲ ಕೃಷ್ಣಭಟ್ಟರು ಮಾಡಿದ ಕಾಲನಿರ್ಣಯವೂ ತಪ್ಪಾಗಿದೆ.
೬. ಕಾರಂತರು ಕಾಲನಿರ್ಣಯಾದಿಗಳಲ್ಲಿ ನಿರಾಸಕ್ತರಾಗಿದ್ದರೂ ಅವರು ಮಾಡಿದ ಹಳೆಯ ಹಸ್ತಪ್ರತಿಗಳ ಸರ್ವೇಕ್ಷಣೆಯಿಂದಲಾಗಿ, ತಿಮ್ಮಪ್ಪಯ್ಯನವರು ಹೇಳುವ

ಸುಬ್ಬನ ಕಾಲಕ್ಕಿಂತ ಹಿಂದಿನ ಕಾಲದ ಯಕ್ಷಗಾನ ರಾಮಾಯಣ ಪ್ರಸಂಗಗಳ ಹಸ್ತಪ್ರತಿಗಳು ದೊರಕಿದುದರಿಂದ ತಿಮ್ಮಪ್ಪಯ್ಯನವರ ಕಾಲನಿರ್ಣಯದಲ್ಲಿ ಅವರಿಗೆ ಅವಿಶ್ವಾಸ ಉಂಟಾದುದು ಸಹಜವಾಗಿದೆ. ಆದರೆ ಕಾಲನಿರ್ಣಯ ಮಾತ್ರ ಸರಿಯಲ್ಲವೆಂದು ಹೇಳದೆ ಪಾರ್ತಿಸುಬ್ಬನು ಕವಿಯಲ್ಲವೆಂದೂ ಅವರು ಹೇಳಹೊರಟುದು ಸಂಶೋಧನೆಯ ದಾರಿಯನ್ನು ತಪ್ಪಿಸಿತು.

೭. ತಮಗುಂಟಾದ ಈ ಸಂದೇಹದಿಂದಾಗಿ ಕಾರಂತರು ಮಧೂರು (ಮದವೂರು) ಕಣ್ವಪುರ (ಕಣಿಪುರ)ಗಳಿಗೂ ಪ್ರಸಂಗಕರ್ತೃವಿಗೂ ಇರುವ ಸಂಬಂಧವನ್ನು ನಿರಾಕರಿಸಿ ಎಲ್ಲೆಲ್ಲಿಗೋ ಕೊಂಡುಹೋಗಿ ಮದ್ದೂರು, ಆಗೊಂಬೆ, ಕಣಿವೆ, ಕಣ್ಣೂರು ಮೊದಲಾದ ಎಲ್ಲೆಲ್ಲಿಯ ಊರುಗಳನ್ನು ಎಳೆದು ತಂದುದು ಅಪ್ರಸ್ತುತ. 'ಕುಂಬಳೆಯ ಪಾರ್ತಿಸುಬ್ಬ' ಎಂಬ ಮಾತು ತಲತಲಾಂತರದಿಂದ ಪರಿಸರದ ಜನತೆಯಲ್ಲಿ ಪ್ರಚಲಿತವಾಗಿರುವುದನ್ನು ಕಾರಂತರು ಅಲ್ಲಗಳೆಯುತ್ತಾರಷ್ಟೆ ಹೊರತು ತಾವು ಹೇಳುವ ಆ ಯಾವ ಯಾವುವೋ ಬೇರೆ ಊರುಗಳಲ್ಲಿ ಅಂಥವನಿದ್ದನೆಂಬ ಬಗ್ಗೆ ಆಧಾರವೇನನ್ನೂ ಕೊಡದಿರುವುದು ಅವರ ವಾದದ ಋಣಾಂಶ.

೮. ಸುಬ್ಬನೆಂಬ ಹೆಸರಿನವರು ಯಕ್ಷಗಾನ ಕ್ಷೇತ್ರದಲ್ಲಿ ಪ್ರಸಂಗಕರ್ತೃಗಳಾಗಿ ಹಲವು ಜನವಿದ್ದುದರಿಂದ ಅವರ ಕೃತಿಗಳನ್ನೆಲ್ಲ ಒಬ್ಬನವೆಂದು ಪ್ರತಿಪಾದಿಸಿರುವುದು ಮತ್ತು ಈತನು ಬ್ರಹ್ಮಾವರದವನೆಂದು ಕಾರಂತರು ವಾದಿಸಿರುವುದು ಸಮಂಜಸವಲ್ಲ. ಅಜಪುರ ಎಂದು ಹೆಸರು ಬದಲಾವಣೆ ಮಾಡಿ ಉಲ್ಲೇಖಗೊಂಡ 'ಅಜಪುರ' ಎಂಬುದನ್ನೂ ಬ್ರಹ್ಮಾವರಕ್ಕೆ ಅನ್ವಯಿಸಿ ಪ್ರತಿಪಾದನೆ ಮಾಡಿರುವುದು ಸರಿಯಾಗಲಿಲ್ಲ.[೫]

೯. ಕಾರಂತರು ಮಾಡಿದ ಹಸ್ತಪ್ರತಿಯ ಕಾಲನಿರ್ಣಯವು ಹೆಚ್ಚಿನವು ಸಮಂಜಸವಾಗಿಲ್ಲ. (ಯಕ್ಷಗಾನ ಬಯಲಾಟದ ಮೊದಲ ಮುದ್ರಣದಲ್ಲಿ ಕಾಲನಿರ್ಣಯವು ತಪ್ಪಾಗಿದ್ದು, ಎರಡನೇ ಮುದ್ರಣದಲ್ಲಿ ಅವೆಲ್ಲವನ್ನು ಸರಿಪಡಿಸಲಾಗಿದೆಯೆಂದು ಕಾರಂತರೇ ಮುನ್ನುಡಿಯಲ್ಲಿ ಹೇಳಿದ್ದರೂ ಆ ಕಾಲನಿರ್ಣಯಗಳೂ ಕೂಡಾ ಸಮಂಜಸವಾಗಿಲ್ಲವೆಂದು ಕುಕ್ಕಿಲ ಕೃಷ್ಣಭಟ್ಟರು, ಇತಿಹಾಸ ತಜ್ಞ ಮಂಜೇಶ್ವರ ಮುಕುಂದ ಪ್ರಭುಗಳು ಮೊದಲಾದವರು ಗುರುತಿಸಿರುತ್ತಾರೆ. ಆದುದರಿಂದ ಕಾರಂತರು ಮಾಡಿದ ಆ ಹಸ್ತಪ್ರತಿಗಳ ಕಾಲನಿರ್ಣಯಗಳನ್ನು ಖಚಿತವಾಗಿ ಆಧರಿಸುವುದು ಕಷ್ಟವಾಗಿದೆ.

---

೫. ಅಜಪುರವೆಂದರೆ ಬ್ರಹ್ಮಾವರವೆಂದೇ ಪ್ರತಿಪಾದನೆ ಮಾಡಿದುದರಿಂದ ಬ್ರಹ್ಮಾವರದಲ್ಲಿ ಅಜಪುರ ಕರ್ನಾಟಕ ಸಂಘ ಎಂಬ ಸಂಸ್ಥೆ ತಲೆಯೆತ್ತಿತ್ತು.
(೧೯೫೭) ನಮ್ಮ ಅಜಪುರ ಎಂಬ ಲೇಖನ ಸಂಪುಟವೊಂದು ಹೊರಬಂತು. ಬೈಕಾಡಿ ವೆಂಕಟಕೃಷ್ಣ ರಾಯರೇ ಮೊದಲಾದವರು ಈ ಕರ್ನಾಟಕ ಸಂಘಕ್ಕಾಗಿ ಪರಿಶ್ರಮಪಡುವ ಅವಕಾಶವೊದಗಿತು.

೧೦. ಈ ಚರ್ಚೆಯಲ್ಲಿ ಸಂಶೋಧಕರಲ್ಲದವರು ಭಾಗವಹಿಸಿ, ಪಾರ್ತಿಸುಬ್ಬನ ಸಮಸ್ಯೆಯನ್ನು ಭಾವನಾತ್ಮಕಗೊಳಿಸಿ ಕೆಲವು ಕೃತಕ ದಾಖಲೆಗಳನ್ನು (ಚರಮ ಶ್ಲೋಕ) ಸೃಷ್ಟಿಸಿ ಸಮಸ್ಯಾ ಪರಿಹಾರದ ದಾರಿ ತಪ್ಪಿಸಿದುದು ಈ ಸಂಶೋಧನಾ ಸಂವಾದದಲ್ಲಿ ನಡೆಯಬಾರದಾಗಿದ್ದ ವಿಷಯ. ಕವಿಭೂಷಣ ಕೆ.ಪಿ.ವೆಂಕಪ್ಪ ಶೆಟ್ಟಿಯವರು 'ಯಕ್ಷಗಾನದ ಕಲೆ' ಎಂಬ ಒಂದು ಲೇಖನ ಬರೆದಿದ್ದು ಅದರಲ್ಲಿ ಸುಬ್ಬನನ್ನು ಸ್ಮರಿಸುವ ಚರಮಶ್ಲೋಕದ ರೀತಿಯ ಕಂದಪದ್ಯವೊಂದನ್ನು ಉದಾಹರಿಸಿದ್ದಾರೆ.[೬] ಆ ಕಂದಪದ್ಯ ಈ ರೀತಿ ಇದೆ:

**ರಸಿಕಂ ರಸಾರ್ದ್ರಚಿತ್ರಂ**
**ಪೊಸದೇಸಿಯ ಕಬ್ಬಿಗನೊವಜಂ ಪಾರ್ವತಿಜಂ**
**ಕುಶಲಿಗ ಯಕ್ಷರ ಸಾಹಿತಿ**
**ಯಸುವಳಿಸಿದ ದುರ್ಮತಿ ಪೆಸರಿರದಿರ್ಕೆಂದುಂ**

ಈ ಪದ್ಯವನ್ನು ಕೃತಕ ಸೃಷ್ಟಿಯೆಂದು ಯಕ್ಷಗಾನ ವಿದ್ವಾಂಸ ಪ್ರೊ. ಅಮೃತ ಸೋಮೇಶ್ವರರು ದಾಖಲಿಸಿದ್ದಾರೆ.[೭]

೧೧. ಈ ಮೇಲಿನ ಎಲ್ಲ ವಿಷಯಗಳಿಂದಾಗಿ ಜಟಿಲವಾದ ಪಾರ್ತಿಸುಬ್ಬನ ಸಮಸ್ಯೆ ಯಕ್ಷಗಾನದಲ್ಲಿ ಹೊಸ ಸಂಶೋಧನೆಯ ಹಲವು ಮುಖಗಳನ್ನು ತೆರೆದು ತೋರಿ ಒಂದು ಬಗೆಯ ಜಾಗೃತಿಯನ್ನುಂಟುಮಾಡಿತು ಎಂಬುದು ಐತಿಹಾಸಿಕ ಸತ್ಯ.[೮]
ಇಷ್ಟು ವಿಷಯಗಳ ಹಿನ್ನೆಲೆಯೊಡನೆ ಕುಕ್ಕಿಲ ಕೃಷ್ಣಭಟ್ಟರು ಪಾರ್ತಿಸುಬ್ಬನ ಸಮಸ್ಯೆಗೆ ನಿಜವಾದ ಪರಿಹಾರವನ್ನು ಕಂಡುಕೊಳ್ಳಲಿಕ್ಕಾಗಿ ಉದ್ಯುಕ್ತರಾದರು. ಪಾರ್ತಿಸುಬ್ಬನ ಬಗೆಗೆ ಈ ಹಂತದಲ್ಲಿದ್ದ ಪ್ರಶ್ನೆಗಳು ಇವು–
೧. ಪಾರ್ತಿಸುಬ್ಬನು ಯಕ್ಷಗಾನ ರಾಮಾಯಣ ಪ್ರಸಂಗಗಳು ಕರ್ತೃವೇ?
೨. (ಹೌದಾದಲ್ಲಿ) ಆ ಪಾರ್ತಿಸುಬ್ಬನ ಪ್ರಸಂಗಗಳು ಯಾವುವು?

---

೬. ಈ ಲೇಖನವು ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರ ಅಭಿನಂದನ ಗ್ರಂಥ ಸಮರ್ಪಣೆಯಲ್ಲಿ ಪ್ರಕಟಗೊಂಡಿದೆ. ೧೯೫೦.

೭. ಪಾರ್ತಿಸುಬ್ಬ ಹಾಗೂ ಹಿರಿಯ ಸಂಶೋಧಕರು ಎಂಬ ಲೇಖನ. ಯಕ್ಷತರು. ೨೦೧೩, ಡಾ. ದಯಾನಂದ ಪೈ. ಶ್ರೀ ಸತೀಶ್ ಪೈ ಯಕ್ಷಗಾನ ಅಧ್ಯಯನ ಕೇಂದ್ರ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ, ಪು.೧೧೧

೮. ಪಾರ್ತಿಸುಬ್ಬನ ಸಂಶೋಧನೆಯ ವಿಷಯದಲ್ಲಿ ಕನ್ನಡದ ಹಿರಿಯ ಸಂಶೋಧಕರೂ ದಾರಿ ತಪ್ಪಿದ್ದಾರೆಂಬುದನ್ನು ಪ್ರೊ. ಅಮೃತ ಸೋಮೇಶ್ವರರು ಪೂರ್ವೋಕ್ತ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

೩. ಪಾರ್ತಿಸುಬ್ಬನು ಎಲ್ಲಿಯವನು? ಕುಂಬಳೆಯವನು ಹೌದೇ? ಅಲ್ಲವೇ?
೪. ಯಕ್ಷಗಾನ ರಾಮಾಯಣ ಪ್ರಸಂಗಗಳು ಕಥಕಳಿ ರಾಮಾಯಣದಿಂದ ಪ್ರಭಾವಿತವಾದುವು ಹೌದೇ?
೫. ಪಾರ್ತಿಸುಬ್ಬನ ಕಾಲವಾವುದು?

ಈ ಪ್ರಶ್ನೆಗಳನ್ನು ವಿವೇಚನೆಗೆ ತೆಗೆದುಕೊಂಡು ಕುಕ್ಕಿಲ ಕೃಷ್ಣಭಟ್ಟರು ಯಾವುದಕ್ಕೂ ಮೊದಲು ಸುಬ್ಬನ ಕೃತಿಗಳನ್ನು ಗ್ರಂಥ ಸಂಪಾದನೆಯ ನಿಯಮಗಳಂತೆ ಶಾಸ್ತ್ರೀಯವಾಗಿ ಸಂಪಾದಿಸಬೇಕಾದ ಅವಶ್ಯಕತೆಯನ್ನು ಮನಗಂಡರು. ವ್ಯಾಪಕ ವಿಷಯ ಸಂಗ್ರಹ, ಕ್ಷೇತ್ರಕಾರ್ಯ, ಹಸ್ತಪ್ರತಿಗಳ ಸಂಗ್ರಹ ಇತ್ಯಾದಿಗಳನ್ನು ನಡೆಸಿ ಪಾರ್ತಿಸುಬ್ಬನ ಯಕ್ಷಗಾನಗಳು ಎಂಬ ಹೆಬ್ಬೊತ್ತಗೆಯನ್ನು ರಚಿಸಿದರು.[೯] ಅದಕ್ಕೆ ವಿಸ್ತಾರವಾದ ಪೀಠಿಕೆಯನ್ನು ಬರೆದು ಪಾರ್ತಿಸುಬ್ಬನ ಸಮಸ್ಯೆಯು ಅಂತಿಮವಾಗಿ ಪರಿಹಾರವಾಗುವಂತೆ ಸಾಧಾರಣವಾಗಿ ಕಾಲನಿರ್ಣಯವನ್ನೂ ಮಾಡಿದರು. ಈ ಪೀಠಿಕೆಯಲ್ಲಿ ಅಂತಿಮವಾಗಿ ಕಾಲನಿರ್ಣಯ ಮಾಡುವ ಮೊದಲು ಪಾರ್ತಿಸುಬ್ಬನ ಕಾಲ ಕರ್ತೃತ್ವ ನಿರ್ಣಯದ ಸಮಸ್ಯೆ ಹೇಗೆ ಬೆಳೆದುಕೊಂಡು ಬಂತೆಂಬ ಐತಿಹಾಸಿಕ ಅವಲೋಕನವನ್ನು ಅವರು ಮಾಡಿದ್ದಲ್ಲಿ ತುಂಬ ಪ್ರಯೋಜನವಿತ್ತು. ಆದರೆ ಅನವಶ್ಯ ಚರ್ಚೆಗಳ ವಿಷಯ ವಿಸ್ತರಣೆ ಬೇಡವೆಂದೋ ಏನೋ ಅವರು ಅದನ್ನು ಮಾಡಿಲ್ಲ. ಇದೇ ಕಾಲದಲ್ಲಿ ಕಾರಂತರು ಯಕ್ಷಗಾನ ಎಂಬ ಹೊಸದೊಂದು ಪುಸ್ತಕವನ್ನು ಪ್ರಕಟಿಸಿದರು.[೧೦] ಈ ಗ್ರಂಥದಲ್ಲಿ ಕಾರಂತರು ಪಾರ್ತಿಸುಬ್ಬನ ಬಗೆಗಿನ ಹೆಚ್ಚಿನ ವಾದಗಳಿಗೆ ಹೋಗದೆ ರಾಮಾಯಣ ಪ್ರಸಂಗಗ ಕರ್ತೃವನ್ನು ಅಜ್ಞಾತಕವಿಯೆಂದೂ ಕಣ್ವಪುರದ ಕೃಷ್ಣನ ಭಕ್ತನೆಂದೂ ಉಲ್ಲೇಖಿಸಿದ್ದಾರೆ. ಆದರೂ ಆ ಕಣ್ವಪುರವೆಂಬುದು ಕುಂಬಳೆ ಎಂಬ ಸ್ಥಳ ಎಂಬ ಬಗೆಗೆ ಅವರಿಗೆ ಸಮ್ಮತಿ ಇಲ್ಲ. ಮದವೂರು ಕಾಸರಗೋಡು ತಾಲೂಕಿನ ಮಧೂರು ಎಂಬುದೂ ಅವರಿಗೆ ಸಮ್ಮತವಲ್ಲ. ಪ್ರಸಂಗ ಕರ್ತೃ ಪಾರ್ತಿಸುಬ್ಬನೆಂಬುದೂ ಅವರಿಗೆ ಅಸಮ್ಮತ. ಕವಿ ಸ್ತುತಿಸಿರುವ ದೇವತೆಗಳ ದೇವಾಲಯಗಳು ಉಡುಪಿಯ ಪರಿಸರವೆಂದು ಅವರ ಅಂಬೋಣ. ಒಟ್ಟಿನಲ್ಲಿ ಪಾರ್ತಿಸುಬ್ಬನ ಕೃತಿಗಳು ಅನಾಮಧೇಯ–ಅಜ್ಞಾತ ಕವಿಯ ರಚನೆಗಳೆಂದೇ ಕಾರಂತರ ಅಂತಿಮ ಅಭಿಪ್ರಾಯವಾಯಿತು.

೯. ಕುಕ್ಕಿಲ ಕೃಷ್ಣಭಟ್ಟ (ಸಂ) ೧೯೭೫ ಪಾರ್ತಿಸುಬ್ಬನ ಯಕ್ಷಗಾನಗಳು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೧೦. ಶಿವರಾಮ ಕಾರಂತ, ೧೯೭೪ ಯಕ್ಷಗಾನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

ತಮ್ಮ ಹಿಂದಿನ ಕಾಲನಿರ್ಣಯ, ಕಾರಂತರೊಂದಿಗಿನ ಚರ್ಚೆ, ಟೀಕೆ–ಟಿಪ್ಪಣಿಗಳು ಇತ್ಯಾದಿಗಳೆಲ್ಲವನ್ನೂ ಕೈಬಿಟ್ಟು ದೊರಕಿದ ಹೊಸ ಆಧಾರಗಳನ್ನೂ ವಸ್ತುಸ್ಥಿತಿಯನ್ನೂ ವಿವೇಚಿಸಿ ಪಾರ್ತಿಸುಬ್ಬನ ಯಕ್ಷಗಾನಗಳು ಪೀಠಿಕೆಯಲ್ಲಿ ಕುಕ್ಕಿಲ ಕೃಷ್ಣಭಟ್ಟರು ತಲುಪಿದ ನಿರ್ಣಯಗಳನ್ನು ಈ ಕೆಳಗಿನಂತೆ ಸಂಗ್ರಹಿಸಬಹುದಾಗಿದೆ.

೧. ಪಾರ್ತಿಸುಬ್ಬನು ಕುಂಬಳೆಯವನು; ಪಾರ್ತಿ ಎಂಬುವಳ ಮಗ.

೨. ಪುತ್ರಕಾಮೇಷ್ಠಿ–ಸೀತಾಕಲ್ಯಾಣ; ಪಟ್ಟಾಭಿಷೇಕ–ಪಂಚವಟಿ; ಪಂಚವಟಿ–ವಾಲಿಸಂಹಾರ; ಉಂಗುರಸಂಧಿ; ಸೇತುಬಂಧನ; ಅಂಗದ ಸಂಧಾನ; ಕುಂಭಕರ್ಣಾದಿ ಕಾಳಗ – ಇವು ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳು. ಕುಶಲವರ ಕಾಳಗ ಉತ್ತರ ರಾಮಾಯಣಕ್ಕೆ ಸಂಬಂಧಿಸಿದ ಕೃತಿ. ಶ್ರೀಕೃಷ್ಣಚರಿತ ಭಾಗವತದ ಪ್ರಸಂಗ ಕೃತಿ. ಐರಾವತ ಮಹಾಭಾರತಕ್ಕೆ ಸಂಭಂಧಿಸಿದ ಕೃತಿ. ಸಭಾಲಕ್ಷಣವು ಯಕ್ಷಗಾನದ ರಂಗ ನಿಯಮಾದಿಗಳನ್ನು ನಿರೂಪಿಸುವ ಆಧಾರಗ್ರಂಥ. ಪಾರ್ತಿಸುಬ್ಬನು ರಾವಣ ವಧೆಯನ್ನು ಬರೆದಿಲ್ಲ.

೩. ಕಥಕಳಿ ರಾಮಾಯಣವನ್ನು ಸುಬ್ಬನು ಚೆನ್ನಾಗಿ ಬಲ್ಲವನಾಗಿದ್ದು ಅದರ ಪ್ರಭಾವವು ಈತನ ರಾಮಾಯಣ ಪ್ರಸಂಗ ಕೃತಿಗಳ ಮೇಲಾಗಿರುವುದು ಪರಿಶೀಲನೆಯಿಂದ ತಿಳಿಯುತ್ತದೆ.

೪. ಕನ್ನಡದ ತೊರವೆ ರಾಮಾಯಣದ ಪ್ರಭಾವವು ಈತನ ರಾಮಾಯಣ ಪ್ರಸಂಗಗಳ ಮೇಲಾಗಿರುವುದನ್ನೂ ಗುರುತಿಸಬಹುದಾಗಿದೆ.

೫. ಕುಶಲವರ ಕಾಳಗದಲ್ಲಿ ಸುಬ್ಬನು ಜೈಮಿನಿ ಭಾರತದಿಂದ ಪ್ರಭಾವಿತನಾಗಿ ಸ್ವೀಕರಣಗಳನ್ನು ಮಾಡಿರುತ್ತಾನೆ.

೬. ಶ್ರೀಕೃಷ್ಣ ಬಾಲಲೀಲೆ ಕಥಾಪ್ರಸಂಗಕ್ಕೆ ಸುಬ್ಬನು ಶ್ರೀಕೃಷ್ಣ ಚರಿತ ಎಂಬ ಹೆಸರನ್ನಿರಿಸಿದ್ದಾನೆ. ಮತ್ತು ಅದರ ಪದ್ಯ ರಚನೆಯಲ್ಲಿ ಕನ್ನಡ ಭಾಗವತದ ದಶಮಸ್ಕಂಧವನ್ನು ನೆರಳಂತೆ ಅನುಸರಿಸಿಕೊಂಡು ಬಂದಿದ್ದಾನೆ.

೭. ಐರಾವತ ಪ್ರಸಂಗದಲ್ಲಿ ಕನ್ನಡ ಭಾರತದ ಪದ್ಯಗಳಿಗೆ ಸಂವಾದಿಯಾಗಿರುವ ಪದ್ಯಗಳನ್ನು ಗುರುತಿಸಬಹುದು.

೮. ಛಂದಸ್ಸು, ಶೈಲಿ, ನಾಣ್ಣುಡಿಗಳ ಬಳಕೆ, ನಿರೂಪಣ ವಿಧಾನ ಇವು ಈ ಎಲ್ಲ ಪ್ರಸಂಗಗಳು ಒಬ್ಬನವೆಂದು ನಿಶ್ಚಯಿಸಲು ಆಂತರಿಕ ಆಧಾರಗಳಾಗುತ್ತವೆ.

೯. ಹಲವು ಪ್ರಸಂಗಗಳಲ್ಲಿ ಮದವೂರ ವಿಘ್ನೇಶನ ಸ್ತುತಿ ಇದೆ. ಸಭಾ ಲಕ್ಷಣದಲ್ಲಿ ಮೊದಲು ಸ್ತುತಿಸಲ್ಪಡುವವನು ಮದವೂರ ವಿಘ್ನೇಶ. ಈ ವಿಘ್ನೇಶನ ಸ್ತುತಿಯಿಂದಲೇ ಈಗಲೂ ಆಟ, ತಾಳಮದ್ದಳೆಗಳು ಕೊನೆಗೊಳ್ಳುತ್ತವೆ.

೧೦.ಕಣ್ವಪುರ ಕೃಷ್ಣನ ಮುದ್ರಿಕೆ ಇವನ ಎಲ್ಲ ಕೃತಿಗಳಲ್ಲಿ ಕಂಡುಬರುತ್ತವೆ.

೧೧.ಐರಾವತದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಸ್ತುತಿಸುವ ವಾಕ್ಯಗಳು ಕುಂಬಳೆಯ ಕೃಷ್ಣ ದೇವಸ್ಥಾನದ ಪಾಟಾಳಿಗಳು ಸ್ತುತಿಪಾಠಗಳಲ್ಲಿಯೂ ಇವೆ.

೧೨.ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಗಜಗೌರೀವ್ರತದ ಸಂಕಲ್ಪವುಳ್ಳ (೨೮–೪–೧೬೧೭ನೇ ಭಾನುವಾರಕ್ಕೆ ಸರಿಹೋಗುವ) ಐರಾವತದ ಹಸ್ತಪ್ರತಿ ದೊರಕಿದ್ದು ಇದು ಆತನ ಕೊನೆ ಕೃತಿ ಎಂದು ಭಾವಿಸಿದರೆ ಕ್ರಿ.ಶ. ೧೫೯೦ರಿಂದ ೧೬೨೦ರ ವರೆಗೆ ಅವನ ಯಕ್ಷಗಾನ ಕವಿತೆಗಳು ರಚಿತವಾದುವೆಂದು ತಿಳಿಯಬಹುದಾಗಿದೆ.

೧೩.ಕಥಕಳಿ ರಾಮಾಯಣದ ರಚನೆ ಕ್ರಿ.ಶ.೧೫ನೇ ಶತಮಾನದಲ್ಲಿ ನಡೆದಿದ್ದು ಕ್ರಿ.ಶ.೧೪೯೭ರಲ್ಲಿ ಕೊಲ ಗಣಪತಿ ದೇವಸ್ಥಾನದಲ್ಲಿ ಮೊದಲಾಗಿ ಪ್ರಯೋಗಿಸಲ್ಪಟ್ಟಿತು.

೧೪.ಪಾರ್ತಿಸುಬ್ಬನ ವಿಷಯದ ಬಗೆಗಿನ ಚರ್ಚೆಗಳಲ್ಲಿ ಉದಾಹರಿಸಲಾದ ಕೋರ್ಟು ದಾಖಲೆ, ಮೂಡಪ್ಪ ಸೇವೆ ಉತ್ಸವಕ್ಕೆ ಸಂಬಂಧಪಟ್ಟ ಲೆಕ್ಕಪತ್ರದ ದಾಖಲೆ ಮೊದಲಾದವುಗಳಲ್ಲಿ ಕಾಣುವ ಪಾರ್ತಿಸುಬ್ಬ ಎಂಬ ಹೆಸರು ಸುಮಾರು ೧೫೦ ವರ್ಷಕ್ಕೆ ಹಿಂದೆ ಅದೇ ಕಣಿಪುರದಲ್ಲಿದ್ದ ಅದೇ ಹೆಸರಿನ ಇನ್ನೊಬ್ಬ ವ್ಯಕ್ತಿಯದಷ್ಟೆ ಹೊರತು ಕವಿ ಪಾರ್ತಿಸುಬ್ಬನದಲ್ಲ.

ಈ ಮೇಲಿನ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ತೋರುವುದೆಂದರೆ, ಈ ಪೀಠಿಕೆಯಲ್ಲಿ ಕುಕ್ಕಿಲ ಕೃಷ್ಣ ಭಟ್ಟರು ಹೇಳುವ ಮಾತುಗಳು ಪಾರ್ತಿಸುಬ್ಬನ ಬಗೆಗೆ ಅಂತಿಮ ತೀರ್ಮಾನವೆಂದು ಹೇಳಬಹುದಾದಂಥವಾಗಿರುತ್ತವೆ. ಗಜಗೌರೀವ್ರತದ ಸಂಕಲ್ಪಕಾಲ, ಕಥಕಳಿ ರಾಮಾಯಣದ ಸಂಬಂಧ, ತೊರವೆರಾಮಾಯಣ, ಜೈಮಿನಿ

ಭಾರತ, ಕನ್ನಡ ಭಾರತ– ಇವುಗಳ ಅನುಸರಣೆ ಈ ವಿಷಯಗಳು ಅವರಿಗೆ ಸರಿಯಾದ ಕಾಲನಿರ್ಣಯಕ್ಕೆ ಮುಖ್ಯವಾದ ಆಧಾರಗಳಾಗುತ್ತವೆ.

ಡಾ. ಶಿವರಾಮ ಕಾರಂತರು ಯಕ್ಷಗಾನ ಬಯಲಾಟವೆಂಬ ಪುಸ್ತಕ ಬರೆದು ೧೯೫೭ರಲ್ಲಿ ಅದನ್ನು ಪ್ರಕಟಿಸಿ ಪಾರ್ತಿಸುಬ್ಬನದೆನ್ನಲಾದ ಕೃತಿಗಳನ್ನು ಅವನದಲ್ಲವೆಂದೂ ಪಾರ್ತಿಸುಬ್ಬನು ಕವಿಯೇ ಅಲ್ಲವೆಂದೂ ಸುಬ್ಬನೆಂಬನು ಅಜಪುರ ಅಥವಾ ಬ್ರಹ್ಮಾವರದವನೆಂದೂ ಹೇಳಿದಾಗ ಸುಬ್ಬನ ಚರ್ಚೆ ಸ್ಫೋಟಗೊಂಡಿತು. ಮುಖ್ಯವಾಗಿ ಕುಂಬಳೆ ಸೀಮೆಯ ವಿದ್ವಾಂಸರು ಮತ್ತು ತೆಂಕುತಿಟ್ಟಿನ ಯಕ್ಷಗಾನದಲ್ಲಿ ಆಸಕ್ತಿಯುಳ್ಳವರು ಕಾರಂತರ ಈ ವಾದವನ್ನು ತೀವ್ರವಾಗಿ ಪ್ರತಿಭಟಿಸಿದರು ಮತ್ತು ಅನೇಕ ಲೇಖನಗಳನ್ನು ಬರೆದರು. ಈ ಬಗೆಗಿನ ಚರ್ಚೆಗಳು ಬಹಳ ದಿನಗಳ ಕಾಲ ಮುಂದುವರಿದುವು. ಚರ್ಚೆಗಳು ಮಂಗಳೂರು ಪರಿಸರದ ಅಂದಿನ ಕಾಲದ ಪತ್ರಿಕೆಗಳಲ್ಲಿ ಲೇಖನ–ಪ್ರತಿಲೇಖನ ರೂಪದಲ್ಲಿ ನಡೆದುವು. ಆ ಎಲ್ಲ ಲೇಖನಗಳು ಇಂದು ಉಪಲಬ್ಧವಿಲ್ಲ. ಯಕ್ಷಗಾನ ಮತ್ತು ಸಾಹಿತ್ಯಾಸಕ್ತಿ ಉಳ್ಳವರಲ್ಲೆಲ್ಲ ಈ ಚರ್ಚೆಗಳು ದಿನದಿನದ ಮಾತುಕತೆಯ ಮತ್ತು ವಿಚಾರ ವಿಮರ್ಶೆಯ ವಿಷಯಗಳಾಗಿದ್ದುವು. ಈ ವಾದ–ವಿವಾದಗಳಲ್ಲಿ ರಾಷ್ಟ್ರಕವಿ ಗೋವಿಂದ ಪೈ, ಕುಕ್ಕಿಲ ಕೃಷ್ಣಭಟ್ಟ, ಕೂಡ್ಲು ಈಶ್ವರ ಶಾನುಭಾಗ, ಸಿರಿಬಾಗಿಲು ವೆಂಕಪ್ಪಯ್ಯ, ಪೆರ್ಲ ಕೃಷ್ಣಭಟ್ಟ, ಕಿಯ್ಯಾರ ಕಿಞ್ಞಣ್ಣ ರೈ, ವೆಂಕಟರಾಜ ಪುಣಿಂಚಿತ್ತಾಯ, ಬೈಕಾರಿ ವೆಂಕಟಕೃಷ್ಣರಾಯ, ಡಿ.ವಿ.ಹೊಳ್ಳ, ದೇಶಮಂಗಲ ಕೃಷ್ಣ ಕಾರಂತ, ಅಮೃತ ಸೋಮೇಶ್ವರ, ಕವಿಭೂಷಣ ಕೆ.ಪಿ. ವೆಂಕಪ್ಪ ಶೆಟ್ಟಿ, ಕನ್ಯಾನ ಭೀಮ ಭಟ್ಟ ಮೊದಲಾದವರಲ್ಲದೆ ಇನ್ನೂ ಹಲವು ಮಂದಿ ವಿದ್ವಾಂಸರು ಭಾಗವಹಿಸಿದ್ದರು. ೧೯೬೧ರಲ್ಲಿ ಕೋಟೆಕಾರಿನಲ್ಲಿ ಈ ಬಗೆಗೆ ಪಾರ್ತಿಸುಬ್ಬ ಕವಿ ಜಯಂತಿ ಎಂಬ ಹೆಸರಿನಲ್ಲಿ ವಿದ್ವಾಂಸರ ಒಂದು ಸಭೆ ನಡೆದು ಪಾರ್ತಿಸುಬ್ಬನ ದೇಶಕಾಲಾದಿ ನಿರ್ಣಯದ ಬಗೆಗೆ ದಿ. ಕುಕ್ಕಿಲ ಕೃಷ್ಣಭಟ್ಟರು ಸಭೆಯ ಅಧ್ಯಕ್ಷ ಭಾಷಣ ರೂಪದಲ್ಲಿ ಒಂದು ದೀರ್ಘ ಉಪನ್ಯಾಸ ಮಾಡಿದುದು ಒಂದು ಸಣ್ಣ ಪುಸ್ತಕ ರೂಪದಲ್ಲೂ ಪ್ರಕಟಗೊಂಡಿತು.[೩]

---

೩. ಕುಂಬಳೆ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ – ಅಧ್ಯಕ್ಷ ಭಾಷಣ, ಕೋಟೆಕಾರು ಸಾಹಿತ್ಯ ಸಂಘದಿಂದ ಪ್ರಕಾಶಿತ. ಸಾಹಿತ್ಯ ಸಂಘದ ಆಶ್ರಯದಲ್ಲಿ ನಡೆದ ಪಾರ್ತಿಸುಬ್ಬ ಜಯಂತಿ ದಿನಾಂಕ:೩೧.೫.೧೯೬೧. ಇದರಲ್ಲಿ ಪಾರ್ತಿಸುಬ್ಬನ ಬಗೆಗೆ ತಾವು ಸಾಧಾರಣವಾದ ಬೇರೊಂದು ಕೃತಿಯನ್ನು ಬರೆಯುವುದಾಗಿ ಕುಕ್ಕಿಲ ಕೃಷ್ಣಭಟ್ಟರು ಹೇಳಿದ್ದಾರೆ. ಆದರೆ ಆ ಕೃತಿ ಅವರಿಂದ ರಚಿತವಾದಂತಿಲ್ಲ. ಆದರೆ ಪಾರ್ತಿಸುಬ್ಬನ ಕೃತಿಗಳೆಲ್ಲ ಅವರಿಂದ ಸಂಪಾದಿತವಾಗಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡುವು. (೧೯೭೫)

ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಪಾರ್ತಿಸುಬ್ಬನು ಕುಂಬಳೆಯವನೆಂದೂ, ಸ್ಥಾನಿಕ ಬ್ರಾಹ್ಮಣನೆಂದೂ ೧೭೬೦ರಿಂದ ೧೮೨೦ರ ವರೆಗೆ ಅವನು ಇದ್ದಿರಬೇಕೆಂದೂ ಊಹಿಸಿದ್ದರು. ಕುಕ್ಕಿಲ ಕೃಷ್ಣಭಟ್ಟರು ಉಪನ್ಯಾಸದಲ್ಲಿ ಸುಮಾರು ಅದೇ ಕಾಲವನ್ನೇ ಸಮರ್ಥಿಸುವ ಮಧೂರು ಮೂಡಪ್ಪ ಸೇವೆ ಲೆಕ್ಕದ ಪಟ್ಟಿಯ ನಕಲು, ಕೋರ್ಟುದಾಖಲೆ ಮೊದಲಾದ ಇನ್ನಷ್ಟು ಆಧಾರಗಳನ್ನು ಕೊಟ್ಟುದಲ್ಲದೆ ಮಲಯಾಳ ಕಥಕಳಿ ರಾಮಾಯಣ ಅಥವಾ ಕೊಟ್ಟಾರಕರ ಮಹಾರಾಜನಿಂದ ರಚಿತವಾದ ರಾಮನಾಟ ಗ್ರಂಥದ ಪದ್ಯಗಳಿಗೂ ಸುಬ್ಬನ ಯಕ್ಷಗಾನ ರಾಮಾಯಣದ ಪದ್ಯಗಳಿಗೂ ಸಂಬಂಧವಿರುವುದನ್ನು ಹಲವಾರು ಉದಾಹರಣೆಗಳನ್ನುದ್ಧರಿಸಿ ಎತ್ತಿ ತೋರಿಸಿರುತ್ತಾರೆ ಮತ್ತು ರಾಮಾಯಣ ಪ್ರಸಂಗಗಳಲ್ಲದೆ ಐರಾವತ ಶ್ರೀಕೃಷ್ಣ ಚರಿತಗಳನ್ನೂ ಈತನು ರಚಿಸಿದ್ದಾನೆಂದು ತೋರಿಸಿಕೊಟ್ಟಿದ್ದಾರೆ. ಶಿವರಾಮ ಕಾರಂತರು ಅಜಪುರದ ವೆಂಕಾರ್ಯನ ಮಗ ಸುಬ್ಬನೆಂಬ ಮೈರಾವಣ ಕಾಳಗದಲ್ಲಿ ಉಕ್ತವಾದ ಅಜಪುರವೆಂಬ ಶಬ್ದವನ್ನು ತೆಗೆದುಕೊಂಡು ಬ್ರಹ್ಮಾವರ ಮತ್ತು ಆಡುವಳ್ಳಿ ಎಂಬುವನ್ನು ಒಂದೇ ಎಂಬುದಾಗಿ ತಿಳಿದುದಲ್ಲದೆ ಸುಬ್ಬನೆಂಬ ಹೆಸರುಳ್ಳ ಬೇರೆ ಬೇರೆ ಯಕ್ಷಗಾನ ಕವಿಗಳ ಕೃತಿಗಳನ್ನು ಒಬ್ಬನದೇ ಎಂಬುದಾಗಿ ಭಾವಿಸಿ ಅವನು ಬ್ರಹ್ಮಾವರದವನೆಂದೇ ಪ್ರತಿಪಾದಿಸಿ ಬರೆದುದರಿಂದ ಈ ವಾದ-ವಿವಾದಗಳಲ್ಲಿ ಸುಬ್ಬನೆಂಬ ಹೆಸರಿನ ಬಗೆಗೆ, ಅವನ ಊರಿನ ಬಗೆಗೆ ಮತ್ತು ಕೃತಿಗಳ ಬಗೆಗೆ ವಿವಿಧ ರೀತಿಯ ಗೊಂದಲಗಳುಂಟಾದವು. ಈ ಗೊಂದಲಗಳನ್ನು ಕುಕ್ಕಿಲ ಕೃಷ್ಣಭಟ್ಟರು ತಮ್ಮ ಉಪನ್ಯಾಸದಲ್ಲಿ ಎತ್ತಿ ತೋರಿಸಿದ್ದಲ್ಲದೆ ಶ್ರೀ ಕೋಟ ಶಿವರಾಮ ಕಾರಂತರ ಸುಬ್ಬನ ಸಮಸ್ಯೆ ಎಂಬ ದೀರ್ಘಲೇಖನವನ್ನೂ ಬರೆದಿದ್ದಾರೆ.[೪] ಯಕ್ಷಗಾನ ಬಯಲಾಟದ ಎರಡನೇ ಮುದ್ರಣವು ೧೯೬೩ರಲ್ಲಿ ಬಂದಾಗ ಶಿವರಾಮ ಕಾರಂತರು ತಮ್ಮ ಮೊದಲಿನ ಹಲವು ಅಭಿಪ್ರಾಯವನ್ನು ಬದಲಾಯಿಸಿಕೊಂಡರು. ಕವಿಗಳ ಮತ್ತು ಹಸ್ತಪ್ರತಿಗಳ ಕಾಲನಿರ್ಣಯದಲ್ಲಿ ತಪ್ಪುಗಳಾಗಿರುವುದನ್ನು ಒಪ್ಪಿಕೊಂಡರು. ಅದರೆ ಸುಬ್ಬನ ಬಗೆಗಿನ ಚರ್ಚೆಯನ್ನು ಸಾಕಷ್ಟು ಮುಂದುವರಿಸಿದರು. ಕುಕ್ಕಿಲ ಕೃಷ್ಣಭಟ್ಟರು ಒದಗಿಸಿದ ದಾಖಲೆಗಳು ಸರಿಯಲ್ಲವೆಂದೂ ವಾದಿಸಿದರು. ಕುಕ್ಕಿಲ ಕೃಷ್ಣಭಟ್ಟರು ಅಂದು ನಿರ್ಣಯ ಮಾಡಿದ್ದ ಕಾಲಕ್ಕಿಂತ ಹಿಂದೆಯೇ ರಾಮಾಯಣ ಪ್ರಸಂಗಗಳಿರುವುದನ್ನು ಅವರು ಎತ್ತಿ ತೋರಿಸಿದ್ದರು. ಪ್ರಕಾಂಡ ಪಂಡಿತರೊಬ್ಬರು ಗ್ರಾಮೀಣ ಸಾಹಿತ್ಯವೆಂಬಂತಿದ್ದ ಯಕ್ಷಗಾನದ ಶ್ರೇಷ್ಠ ಕವಿಯೊಬ್ಬನ ಬಗೆಗೆ ಆಸಕ್ತಿ ವಹಿಸಿ ಗ್ರಂಥರಚನೆ ಮಾಡಿದುದನ್ನು ಕುರಿತು ಕಾರಂತರು ಹೀಗೆ ಒರಟಾಗಿ ಹೇಳಬೇಕಾದ ಅವಶ್ಯಕತೆ ಇರಲಿಲ್ಲ.

---

೪. ಮಧುಪುರ, ಮಧೂರು ಮೂಡಪ್ಪ ಸೇವೆ ಸ್ಮರಣ ಸಂಪುಟ, ೧೯೬೨, ಗೀತಾ ಪ್ರಕಾಶನ, ಕಾಸರಗೋಡು.

**ಮೇಲಲ್ಲಿ ಲವಕುಶರ ಕೂಡೆ ವಾಲ್ಮೀಕಿಮುನಿ**
**ಪೇಳಿದೀ ಸಂಧಿಯ ಪ್ರಸಂಗವನು ಧರೆಯೊಳಗೆ**
**ಹೇಳಿಕೇಳುವರನುಂ ಕಣ್ವಪುರದೊಡೆಯ ಗೋಪಾಲ ರಕ್ಷಿಸುವ ಬಿಡದೆ॥**
**– ಪಟ್ಟಾಭಿಷೇಕ – ಪಂಚವಟಿ**

**ತರಣಿನಂದನನ ಬೀಳ್ಕೊಟ್ಟು ರಘುರಾಮ ಸೋ**
**ದರ ಸಹಿತ ಶ್ರವಣ ಪರ್ವತಕೆ ನಡೆತಂದಲ್ಲಿ**
**ಇರುವರೆಂಬಲ್ಲಿಗಾಯಿತು ಸಂಧಿ ಕಣ್ವಪುರ ಕೃಷ್ಣನ ಕಟಾಕ್ಷದಿಂದ ॥**
**– ವಾಲಿಸಂಹಾರ – ಪಂಚವಟಿ**

**ಅರಿತು ಹೇಳುವ ಕೇಳ್ವ ಪುಣ್ಯವಂತರಿಗೆ ಬಹ**
**ದುರಿತಗಳ ಪರಿಹರಿಸಿ ಸಂತೋಷದಿಂದಲಿ ಕಣ್ವ**
**ಪುರದೊಡೆಯ ಮುದದಿಂದ ಸಕಲ ಭಾಗ್ಯವನಿತ್ತು ಪೊರೆವನನುಗಾಲ ಬಿಡದೆ ॥**
**– ಉಂಗುರಸಂದಿ**

**ವಸುಧೆ ಬೆಳಗಿದಳೆಂಟು ದೆಸೆಯಲಿ**
**ಕುಸುಮ ಮಳೆಗಳ ಸುರಿದರಮರರು**
**ಪೆಸರಿಡಿಸಿತೀ ಸಂಧಿ ಕಣ್ವಪುರೇಶನೊಲವಿನಲಿ ॥**
**– ಸೇತುಬಂಧನ**

**ಅರಿತು ಪೇಳುವ ಕೇಳ್ವ ಪುಣ್ಯವಂತರ ಸಕಲ**
**ದುರಿತಮಂ ಪರಿಹರಿಸಿ ಕರುಣದಿಂದ ಕಣ್ವಪುರ**
**ವರದ ಶ್ರೀ ಗೋಪಾಲಕೃಷ್ಣ ರಾಧಾರಮಣ ಪಾಲಿಸುವನನುಗಾಲವೂ ॥**
**– ಶ್ರೀಕೃಷ್ಣಚರಿತ**

– ಇತ್ಯಾದಿಯಾಗಿ ತನ್ನ ಪ್ರಸಂಗಗಳಲ್ಲಿ ಕಣ್ವಪುರ ಶ್ರೀಕೃಷ್ಣನನ್ನು ಸ್ತುತಿಸಿದಲ್ಲದೆ ಮದವೂರ ವಿಘ್ನೇಶ, ಗೌರಿ, ಶಾರದೆ, ಶಿವ, ಬ್ರಹ್ಮ ಮೊದಲಾದ ದೇವದೇವಿಯರನ್ನೂ ಈತ ಸ್ತುತಿಸಿದ್ದಾನೆ. ವಾಲ್ಮೀಕಿ ವಸಿಷ್ಠ ನಾರದ ಮೊದಲಾದ ಋಷಿಗಳನ್ನು ವಂದಿಸಿದ್ದಾನೆ.

ಪಾರ್ತಿಸುಬ್ಬನಿಗೆ ಯಕ್ಷಗನ ವಾಲ್ಮೀಕಿಯೆಂಬ ಹೆಸರು ಸಾರ್ಥಕ. ಪ್ರಸಂಗ ಕಾವ್ಯ ನಿರೂಪಣೆ, ಸರಳತೆ, ಹೃದ್ಯವಾದ ಭಾಷೆ, ಸೊಗಸಾದ ಕವಿಕಲ್ಪನೆಗಳ ದೃಷ್ಟಿಯಿಂದ ಅವನ ಪ್ರಸಂಗಗಳಷ್ಟು ಶ್ರೇಷ್ಠವಾದವುಗಳು ಯಕ್ಷಗಾನ ಕ್ಷೇತ್ರದಲ್ಲಿ ಬೇರಿಲ್ಲವೆಂದರೂ

ಸಲ್ಲುವುದು. ಅನಂತರದ ಅನೇಕ ಪ್ರಸಂಗಕರ್ತರಿಗೆ ಅವನ ಪ್ರಸಂಗಗಳೇ ಮಾದರಿಯಾಗಿವೆಯಾದುದರಿಂದ ಯಕ್ಷಗಾನ ಪ್ರಸಂಗರಚನೆಯಲ್ಲಿ ಅವನೊಬ್ಬ ಆದರ್ಶ ವ್ಯಕ್ತಿಯೆಂಬುದರಲ್ಲಿ ಸಂದೇಹವಿಲ್ಲ.

* * *

# ಪಾರ್ತಿಸುಬ್ಬನ ಬಗೆಗಿನ ಅಧ್ಯಯನಗಳು ಹಾಗೂ ಕೃತಿ ಪ್ರಕಟಣೆಗಳು

**– ಗಣರಾಜ ಕುಂಬ್ಳೆ, ರಾಮಕುಂಜ**

ಕರ್ನಾಟಕ ಯಕ್ಷಗಾನ ಅಕಾಡೆಮಿ ಹಾಗೂ ಕನ್ನಡ ವಿಭಾಗ, ಭಾಷಾ ಅಧ್ಯಯನ ಕೇಂದ್ರ ಕಣ್ಣೂರು ವಿಶ್ವವಿದ್ಯಾಲಯ, ಕಾಸರಗೋಡು, ಯಕ್ಷಗಾನ ಸಂಶೋಧನಾ ಕೇಂದ್ರ, ಸರ್ಕಾರಿ ಕಾಲೇಜು, ಕಾಸರಗೋಡು ಇವರ ಆಶ್ರಯದಲ್ಲಿ ನಡೆದ ಪಾರ್ತಿಸುಬ್ಬ– ಬದುಕು ಬರಹ, ದ್ವಿದಿನ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ (೧೩.೦೨.೨೦೨೦ ಮತ್ತು ೧೪.೦೨.೨೦೨೦)

ಯಕ್ಷಗಾನದ ನಾಡೋಜ ಕವಿ ಪಾರ್ತಿಸುಬ್ಬ. ಈಗ ಕಾಸರಗೋಡು ಜಿಲ್ಲೆಯ ಕುಂಬಳೆ ಪಟ್ಟಣದವನು. ಕಣಿಪುರ, ಕಣ್ವ್ಯಾರ ಇದೇ ಕುಂಬಳೆಯ ಪುರಾತನ ಹೆಸರುಗಳು. ಕಣ್ವಪುರವೆಂದೂ ಉಲ್ಲೇಖಗಳಿವೆ. ಸ್ವತಃ ಪಾರ್ತಿಸುಬ್ಬನೇ ಈ ಹೆಸರನ್ನು ಬಳಸಿದ್ದಾನೆ.

**ಧಾತ್ರೀ ಮಂಡನ ಕಣ್ವನಾಮ ಪುರದೊಳ್ ಮೈದೋರಿ ಭಕ್ತಾಳಿಯಂ**
**ಸಪ್ಪಾದಾಬ್ಜ ಮಕರಂದದಿಂ ತಣಿಯಿಸುತ್ತಾರಯ್ವ ಶ್ರೀಕೃಷ್ಣನಾ ।**
**ಭಕ್ತಿಸ್ರೋತದೊಳೊಂದುಗೂಡಿ ಹರಿಯುತ್ತೀ ಪಾರ್ವತೀ ನಂದನಂ**
**ಬತ್ತೀಸಂಕೆಯ ರಾಗತಾಳಗಳೊಳೀ ರಾಮಾಯಣಂ ಪಾಡಿದಂ ॥**

– ಹೀಗೆ ಸುಬ್ಬ(ಪಾರ್ತಿಸುಬ್ಬ)ನು ಕುಂಬಳೆಯವನು, ಕಣಿಪುರದ ಶ್ರೀ ಗೋಪಾಲಕೃಷ್ಣ ದೇವರ ಭಕ್ತನೆಂಬುದು ಶ್ರುತವಾಗುತ್ತದೆ. ಆತನ ಪ್ರಸಂಗಕೃತಿಗಳಲ್ಲೂ ಕಣ್ವಪುರ, ಪುರಪತಿ ಎಂಬ ಅಂಕಿತವನ್ನು ಕಾಣಬಹುದು.

ಈತ ಸ್ಥಾನಿಕ ಬ್ರಾಹ್ಮಣ ಜಾತಿವನು. ಕೂಡ್ಲು ಸುಬ್ರಾಯರ ಹೇಳಿಕೆಯಂತೆ – 'ಪಾರ್ತಿಸುಬ್ಬನು ನಮ್ಮ ಬಂಧುಗಳ ವಂಶದಲ್ಲಿ ಹಿರಿಯನೂ ಕುಂಬಳೆಯ ಪಾಟಾಳಿಯೂ ಆಗಿದ್ದನು' (ಮುಳಿಯ ತಿಮ್ಮಪ್ಪಯ್ಯ–ಪಾರ್ತಿಸುಬ್ಬ.)

ಕುಂಬಳೆಯ ದೇವಸ್ಥಾನವು ಕುಂಬಳೆ ಸೀಮೆಯ ಅರಸರ ಆಡಳಿತಕ್ಕೆ ಸೇರಿತ್ತು. ಮಾಯಪ್ಪಾಡಿಯಲ್ಲಿ ಅರಮನೆಯಿತ್ತು. ಅಡೂರು, ಮಧೂರು, ಕಾವು (ಮುಜುಂಗಾವು), ಕಣ್ವಾರಗಳೆಂಬ ನಾಲ್ಕು ಕ್ಷೇತ್ರಗಳು ಅವರ ಯಜಮಾನ್ಯದಲ್ಲಿದ್ದವು.

ಮುಳಿಯ ತಿಮ್ಮಪ್ಪಯ್ಯನವರು ಪಾರ್ತಿಸುಬ್ಬ ಎಂಬ ಗ್ರಂಥವನ್ನೇ ರಚಿಸಿದ್ದಾರೆ. ಐತಿಹ್ಯ, ದಾಖಲೆ, ಹೇಳಿಕೆ, ಪ್ರಸಂಗ ಕೃತಿಗಳ ಅಧ್ಯಯನದ ಮೂಲಕ ಪಾರ್ತಿಸುಬ್ಬನ ಬಗ್ಗೆ ರಚಿಸಿದ ಮೊತ್ತಮೊದಲ ಗ್ರಂಥವಿದು. ಮುಳಿಯದವರು ತಮ್ಮ ಗ್ರಂಥದಲ್ಲಿ ಕೋರ್ಟು ದಾಖಲೆಗಳ ಪರಿಶೀಲನೆಯೊಂದಿಗೆ ಪಾರ್ತಿಸುಬ್ಬನ ವಂಶಾವಳಿಯ ಪುನಾರಚನೆ ಮಾಡಲೂ ಯತ್ನಿಸಿದ್ದಾರೆ–

"ಶ್ರೀ ಬಿ.ಶ್ರೀಧರ ಕಕ್ಕಿಲ್ಲಾಯರು ಒದಗಿಸಿಕೊಟ್ಟ ಕೋರ್ಟು ದಾಖಲೆ ಪತ್ರ"

"ಬೇಕಲ ತಾಲೂಕು ಮುನ್ಸೀಫ ಕೋರ್ಟು ನಂಬರ್ ೫೭೦/೧೮೪೭, ಕಣಿಪುರ ಶ್ರೀ ಗೋಪಾಲಕೃಷ್ಣ ದೇವಸ್ಥಾನದ ಮೇಲ್ ಶಾಂತಿಗಾರರಾಗಿದ್ದ ಗುಂಡಿ ಹಿತ್ತಿಲ ಕೃಷ್ಣ ಅಡಿಗರು ಕುಟುಂಬದ ಯಜಮಾನರಾಗಿರುವಲ್ಲಿ ಅವರ ಮೇಲೆ ಅವರ ತಮ್ಮನ ಮಗ ಗಂಗಾಧರ ಅಡಿಗನು ವಿಭಾಗದ ಕುರಿತು ತಂದ ದಾವೆಯನ್ನು ರಾಜಿಯಿಂದ ತೀರ್ಮಾನಿಸಿಕೊಂಡ ಮೇರೆಗೆ ದಿನಾಂಕ:೦೨.೦೬.೧೮೪೮ರಲ್ಲಿ ವಾದಿ ಮತ್ತು ಪ್ರತಿವಾದಿ ಸಹ ಜೊತೆಯಿಂದ ಕೋರ್ಟಿಗೆ ದಾಖಲು ಮಾಡಿದ ರಾಜಿ ಅರ್ಜಿಗೆ ಕೊಯಿಪ್ಪಾಡಿ ಗ್ರಾಮದ ಪಾಟಾಳಿ ಸುಬ್ಬರಾಯರ ಮಗ ಪಾಟಾಳಿ ಕೃಷ್ಣಯ್ಯ ಎಂಬವರು ಸಾಕ್ಷ್ಯ ದಸ್ಕತು ಹಾಕಿರುತ್ತಾರೆ."

ಅದರಿಂದ ಅವನು ಸುಮಾರು ೧೮೪೭ನೇ ಇಸವಿಯಿಂದ ಮೇಲಲ್ಲ, ಹಿಂದೆಯೇ ಜನಿಸಿದ್ದಿರಬೇಕು ಎಂದು ಗೊತ್ತಾಗುತ್ತದೆ. ಆದರೆ ಇದರೊಂದಿಗೆ ಪಾಟಾಳಿ ಸುಬ್ಬರಾಯರೇ ಪಾರ್ತಿಸುಬ್ಬನಲ್ಲ. ಯಾಕೆಂದರೆ ಪಾರ್ತಿಸುಬ್ಬನಿಗೆ ಗಂಡು ಮಕ್ಕಳಿರಲಿಲ್ಲ. ಒಬ್ಬನೇ ಮಗಳು ಮಾತ್ರ ಇದ್ದಳೆಂಬ ಪರಂಪರೆಯ ಮಾತನ್ನೇ ಆಧರಿಸಿ ಸುಬ್ಬರಾಯರ ದೊಡ್ಡ ತಂದೆಯ ಮಗ ಪಾರ್ತಿಸುಬ್ಬ ಇರಬೇಕು ಎಂದು ಮುಳಿಯದವರು ಊಹಿಸುತ್ತಾರೆ.

ಪಾರ್ವತಿಯೆಂಬ ತಾಯಿ ಹೆತ್ತು ಸಲಹಿದ್ದರಿಂದ 'ಪಾರ್ತಿ'ಸುಬ್ಬನಾಗಿರಬಹುದು ಎಂದು ಹೆಸರಿನ ಬಗ್ಗೆ ಕಲ್ಪಿಸುತ್ತಾರೆ. ಊರವರು ಗುರುತಿಸುವುದಕ್ಕಾಗಿ ಕೂಗಿ ಕರೆದ ಹೆಸರು 'ಪಾರ್ತಿಸುಬ್ಬ'. ಇದು ಮುಳಿಯದವರ ತರ್ಕ.

ಇನ್ನು ಪಾರ್ತಿಸುಬ್ಬನ ವೃತ್ತಿಯ ಬಗ್ಗೆ ಆತ ಪಾಟಾಳಿ. ಈ ಪಾಟಾಳಿ ಪದ ಪಾಡಾಳಿ ಎಂಬ ಪದದ ವ್ಯತ್ಯಸ್ತ ರೂಪವೆಂದು ತಿಮ್ಮಪ್ಪಯ್ಯ ಹೇಳುತ್ತಾರೆ. ಪೂಜಾವಸರದಲ್ಲಿ ಸಂಗೀತ ಸೇವೆ ಪಾಡು (ಹಾಡು)ವ ಸೇವೆ ಮಾಡುವವನು ಎಂಬರ್ಥದಲ್ಲಿ 'ಪಾಡಾಳಿ'. ಡ ಕಾರ ಟ ಕಾರವಾಗುವುದು ಕನ್ನಡದಲ್ಲಿ ಅಸಹಜವಲ್ಲವೆಂದು ಸಮರ್ಥಿಸುತ್ತಾರೆ. 'ಪಾಟಾಳಿ' ವೃತ್ತಿ ಸೂಚಕ. ಅದು ಜಾತಿಸೂಚಕವಾಗಿರದೆಂಬ ಎಣಿಕೆಯನ್ನು ಹೇಳುತ್ತಾರೆ.

ಸುಬ್ಬನು ಬಡತನದ ಬೇಗೆಯಲ್ಲಿದ್ದನೆಂಬುದಕ್ಕೆ ಮುಳಿಯದವರು ಪರಂಪರೆಯಿಂದ ಕೇಳಿದ ಒಂದು ಹೃದ್ಯ ಸಂಭಾಷಣೆಯನ್ನು ಉಲ್ಲೇಖಿಸುತ್ತಾರೆ–

"ಪಾರ್ತಿ : ಮಗೂ ನಾವು ಬಡವರೆಂಬುದು ನಿನಗೆ ಗೊತ್ತಿಲ್ಲವೇ?

ಸುಬ್ಬ : ಅಮ್ಮಾ, ಇದೆ; ಚೆನ್ನಾಗಿ ಗೊತ್ತಿದೆ.

ಪಾರ್ತಿ : ಮಗೂ, ಈ ಪಾಟಾಳಿತನದಿಂದ ನಮ್ಮ ಜೀವನ ಏನೂ ಒಳ್ಳೆಯದಾಗಿ ಮಾರ್ಪಟ್ಟಿದೆಯೇ? ಹೇಳುತ್ತಾರಲ್ಲ, ರಾವಣ ಹೊಟ್ಟೆಗೆ ಕಾಸಿನ ಮಜ್ಜಿಗೆಯೆಂದು, ಹಾಗೆಯೇ ಇದು.

ಸುಬ್ಬ : ಅಮ್ಮಾ, ನಮ್ಮ ಜೀವನವೆಂದರೆ ನೀನು ರಾವಣ ಹೊಟ್ಟೆಯ ಜೀವನವೆಂದು ಭಾವಿಸಿದೆ. ಅದನ್ನೆಣಿಸಿ ನನಗೆ ಸೈಸದ ಬೇಸರವಾಯಿತು. ಅವನೆಂದರೆ ಆದರ್ಶ ದೈವವಾಗಿ ನನ್ನೆದೆ ನಂಬಿದ ಕೃತಿನಾಯಕ ಶ್ರೀರಾಮನ ವಿರೋಧಿಯಲ್ಲವೇ?"

– ಹೀಗೆಯೇ ಸಂಭಾಷಣೆ ಮುಂದುವರಿಯುತ್ತಾ 'ಯದೃಚ್ಛಾ ಲಾಭ ಸಂತುಷ್ಟಿ' ಜೀವನದಲ್ಲಿ ಇರಬೇಕೆಂಬ ನಿಲುವನ್ನು ಸುಬ್ಬ ತಾಯಿಯಲ್ಲಿ ಪ್ರಕಟಿಸುವುದರೊಂದಿಗೆ ಈ ಚುಟುಕು ಸಂಭಾಷಣೆ ಮುಕ್ತಾಯಗೊಳ್ಳುತ್ತದೆ. ಬಡತನದಲ್ಲೂ ಸಂತೃಪ್ತ ಜೀವನ ಸುಬ್ಬನದು ಎಂದು ಕಾಣುತ್ತದೆ.

ಪಾರ್ತಿಸುಬ್ಬನ ಹೆಸರು ಬೆಳಗಿದುದು ಯಕ್ಷಗಾನ ಕವಿತೆಯಲ್ಲಿ. ಆತ ಹೆಸರಾಂತ ಭಾಗವತನಲ್ಲ. ಅವನಿಂದಲೂ ಹಿಂದೆ ಬೆನಕಯ್ಯ ಭಾಗವತನ ಹೆಸರು ಕೇಳಬರುತ್ತದೆ ಮತ್ತು ಸುಬ್ಬನ ಹೆಸರಿನೊಂದಿಗೆ 'ಭಾಗವತ' ಎಂದು ಸೇರಿಕೊಂಡಿಲ್ಲ. ಹಿರಿಯರ ಹೇಳಿಕೆಯಲ್ಲೂ ಇಲ್ಲ. ಆದರೆ ಆತ ಕುಂಬಳೆ ಮೇಳ 'ಕಾರಂತನ ಮೇಳ' (ಯಾವ ಕಾರಂತ ಎಂಬ ಉಲ್ಲೇಖವಿಲ್ಲ)ಗಳಲ್ಲಿ ಭಾಗವತನಾಗಿ ತಿರುಗಾಟ ಮಾಡಿದ ಬಗ್ಗೆ ಸುಬ್ಬ ಹಾಡು ರಚಿಸಿದ್ದಾನೆ.

ಯಕ್ಷಗಾನ ಕಲಾಸಾಹಿತ್ಯಗಳನ್ನು ಬಾಹ್ಯ ಪ್ರಪಂಚಕ್ಕೆ ಅರಿಯದವನಾಗಿದ್ದರೂ ಬಲು ಮನೋಹರವಾಗಿ ರೂಪುಗೊಳಿಸಿದವರೊಳಗೆ ನಮ್ಮ ಪಾರ್ತಿಸುಬ್ಬನೂ ಪ್ರಮುಖನೆಂಬುದನ್ನು ಮರೆಯಲಾಗದು. ಆತನ ಮೂರ್ತಿ ತಿಂದುಂಡುದು, ಕೀರ್ತಿ ಗುರಿಗೊಂಡುದು. ಅಂತೂ ಪಂಪನು ನಾಡೋಜನೆಂದು ಪ್ರಸಿದ್ಧನಾದರೆ ಪಾರ್ತಿಸುಬ್ಬನನ್ನು ಈ ಯಕ್ಷಗಾನ ಪ್ರಪಂಚದಲ್ಲಿ ನಾಡೋಜ ಎನ್ನಬೇಕು.

"ಅವನ ಆದ್ಯಂತಗಳಾದ ಎಲ್ಲ ಹಾಡುಗಳೂ ಲಲಿತಪದಮಿಳಿತಗಳಾಗಿವೆ. ಕ್ಲಿಷ್ಟತೆಗೂ ಅವನಿಗೂ ಗಾವುದಕ್ಕೂ ದೂರ. ಪ್ರಾಸಕ್ಕಾಗಿ ಸಲ್ಲದ ನುಡಿಗಳನ್ನು ತುರುಕುವುದೆಂಬುದು ಅವನು ಹೋದ ದಾರಿಯಲ್ಲಿಲ್ಲ. ರಾಮಕೃಷ್ಣಾದಿ ದೇವತಾ ಸ್ವರೂಪಿಗಳನ್ನೂ ಅವರ ಸಂಬಂಧವಾದ ಪದ್ಯ ಪ್ರಬಂಧಗಳನ್ನು ಬರೆದುದಲ್ಲದೆ ಅನ್ಯ ಲೌಕಿಕರನ್ನು ಬಣ್ಣಿಸಿ ಬರೆವ ಕಡೆಗೆ ಅವನು ತಲೆಹಾಕಿ ಮಲಗಿದವನೂ ಅಲ್ಲ. ವಿವೇಕಿಯಾತನು. ಬಡತನದ ಬೇವು ಬಾಹ್ಯದಲ್ಲಿ ಬಾಡಿಸುತ್ತಿದ್ದರೂ ಅವನ ಅಂತಃಕರಣಕ್ಕೆ ಆ ಬರಗಾಲದ ಬಾಧೆಯೇ ಇರಲಿಲ್ಲ. ಅದರಿಂದ ಎಣಿಕೆ ಇಣುಕಿದೊಡನೆ ಕವಿತಾ ನರ್ತಕಿ ಆತನ ನಾಲಗೆಯಲ್ಲಿ ನಲಿದಾಡುತ್ತಿದ್ದಳು. ಅವನ ಹಾಡುಗಳಲ್ಲಿ ಓದಿ ಪದಚ್ಛೇದ ಮುಡಿ ಅನ್ವಯಾರ್ಥ ತಾತ್ಪರ್ಯಗಳನ್ನು ಶೇಖರಿಸಿಕೊಂಡ ಮೇಲೆ ಆನಂದಗೊಳ್ಳುವುದು ಎಂಬ ಈ ಎಡೆಯ ತೊಡಕೇ ಇಲ್ಲ. ಅದು ಹದಕ್ಕೆ ಹಣ್ಣಾದ ದ್ರಾಕ್ಷೆಯನ್ನು ಬಾಯೊಳಗಿಟ್ಟ ಹಾಗೆ. ಪದಗಿದಗಳೆಲ್ಲ ತಮಗೆ ತಾವೇ ಭೇದವಾಗಿ ಕುತೂಹಲಿತವಾಗಿ ಭಾವನೆಯೆ ಗಂಟಲಿನೊಳಗೆ ನುಸುಳಿಬಿಡುತ್ತವೆ. ಇನ್ನಷ್ಟು ಬರಲಿ ಎಂದು ಬಗೆ ಹಾತೊರೆಯುತ್ತದೆ."

ಮುಳಿಯದವರು ಪಾರ್ತಿಸುಬ್ಬನ ಬಗೆಗೆ ಬರೆಯುತ್ತಾ ಆತ ಮಾರ್ಗಸಾಹಿತಿ ಯಾಗದುದೇ ಒಳಿತೆಂದುಕೊಳ್ಳುತ್ತಾರೆ–

"ಸಾಹಿತ್ಯವನ್ನು ಜೀವಂತವನ್ನಾಗಿ ಮಾಡುವುದು ದೇಸೀ ಸಾಹಿತ್ಯ. ಮಾರ್ಗ ಸಾಹಿತ್ಯ ಮದುವೆ ಮಾಂಗಲ್ಯ ನೈಮಿತ್ತಿಕ ಆಚರಣೆಗಳಂತಾದರೆ, ದೇಸೀ ನಿತ್ಯಾಚಾರದಂತಿರುವುದು ಆಡುನುಡಿ ಮಾಜದ ಉಸಿರಿನಂತೆ ಎಚ್ಚರ, ಕನವರಿಕೆ, ನಿದ್ದೆಗಳಲ್ಲಿಯೂ ಸಾಗುವುದರಿಂದ, ಅದೇ ಆಧಾರವಾದ ದೇಸೀ (ಜನಪದ) ಸಾಹಿತ್ಯವನ್ನು ಜನತೆಯು ನಿರಂತರಾಹಾರದೊಡನೆ ಹೋಲಿಸುವುದೇ ತಕ್ಕುದಾಗಿದೆ. ಒಂದು ವೇಳೆ ಮಾರ್ಗ ಸಾಹಿತ್ಯವು ಇಲ್ಲದಿರುತ್ತಿದ್ದರೂ ದೇಸೀ ಸಾಹಿತ್ಯವಿಲ್ಲದಿರುತ್ತಿದ್ದರೆ ನಮ್ಮ ಸಂಸ್ಕೃತಿಯೇ ಬೇರಳಿದು ಹೋಗುತ್ತಿತ್ತು."

ಸುಬ್ಬನ ಪದಗಳು ಕರಾವಳಿ ಕನ್ನಡಿಗರ ನಾಲಿಗೆಯಲ್ಲಿ ನಲಿಯುತ್ತಿದ್ದುದನ್ನು ಕಾಣುವಾಗಲೆಲ್ಲ ಮುಳಿಯದವರ ಮಾತು ನಿಜವೆಂದು ತೋರುತ್ತದೆ. ಪುತ್ರಕಾಮೇಷ್ಟಿ,

ಶ್ರೀರಾಮ ಪಟ್ಟಾಭಿಷೇಕ, ಪಂಚವಟಿ, ವಾಲಿಸುಗ್ರೀವರ ಕಾಳಗ, ಉಂಗುರ ಸಂಧಿ, ಸೇತುಬಂಧ, ಅಂಗದ ಸಂಧಾನ, ಕುಂಭಕರ್ಣ ಕಾಳಗ, ಇಂದ್ರಜಿತು ಕಾಳಗ, ಪ್ರಸಂಗಗಳನ್ನು ಸುಬ್ಬ ರಚಿಸಿದ್ದಾನೆ. (ರಾಮಾಯಣ), ಐರಾವತ (ಭಾರತ) ಸಭಾ ಲಕ್ಷಣ ಪಾರ್ತಿಸುಬ್ಬ ಬರೆದದ್ದಲ್ಲ. ಬೆನಕಯ್ಯ ಭಾಗವತ ಬರೆದುದು ಎಂದು ಮುಳಿಯದವರು ತೀರ್ಮಾನಕ್ಕೆ ಬಂದಿದ್ದಾರೆ. 'ರಾವಣ ವಧೆ'ಯ ರಚನೆ ಸುಬ್ಬನದೆಂದು ಬಗ್ಗೆ ಅವರು ನಿರ್ಣಯಕ್ಕೆ ಬಂದಿಲ್ಲ.

ಪಾರ್ತಿಸುಬ್ಬನ ಎಲ್ಲ ಯಕ್ಷಗಾನ ಪ್ರಸಂಗಗಳನ್ನೂ ಸಂಪಾದಿಸಿ ಅವುಗಳನ್ನು ಕುರಿತು ಟಿಪ್ಪಣಿ ಬರೆದು, ವಿಮರ್ಶಿಸಿದ ಕಾರ್ಯ ಶ್ರೀಯುತರದು.

ಕುಕ್ಕಿಲ ಕೃಷ್ಣಭಟ್ಟರು 'ಪಾರ್ತಿಸುಬ್ಬನ ಯಕ್ಷಗಾನಗಳು' ಎಂಬ ಗ್ರಂಥವನ್ನು ೧೯೭೫ರಲ್ಲಿ ಪ್ರಕಟಿಸಿದ್ದಾರೆ (ಅದು ೨೦೦೯ರಲ್ಲಿ ಮರುಮುದ್ರಣವನ್ನೂ ಕಂಡಿದೆ) ಹಾ.ಮಾ.ನಾಯಕರು ಮುನ್ನುಡಿ ಬರೆದು ('ಜಾನಪದ ಮಾಲೆ'ಯ ಪ್ರಧಾನ ಸಂಪಾದಕರು) 'ಪಾರ್ತಿಸುಬ್ಬನ ಯಕ್ಷಗಾನಗಳು' ಜನಪದ ಮಾಲೆಯಲ್ಲಿ ಪ್ರಕಟವಾಗುತ್ತಿರುವ ಮುವ್ವತ್ತನೆಯ ಕೃತಿಯಾಗಿದೆ. ಯಕ್ಷಗಾನಗಳಿಗೆ ಸಂಬಂಧಪಟ್ಟ ಮೊದಲನೆಯ ಗ್ರಂಥವಾಗಿದೆ. ಪಾರ್ತಿಸುಬ್ಬನ ಯಕ್ಷಗಾನ ಕೃತಿಗಳನ್ನು ಕಲೆ ಹಾಕಿ, ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟವರು ಈ ಕ್ಷೇತ್ರದ ಗಣ್ಯ ವಿದ್ವಾಂಸರಾದ ಶ್ರೀ ಕುಕ್ಕಿಲ ಕೃಷ್ಣಭಟ್ಟರು ಎಂದು (೧೯೭೫ರಲ್ಲಿ) ಶ್ಲಾಘಿಸಿದ್ದಾರೆ.

ತಾವು ಪ್ರಕಟಿಸಿದ ಗ್ರಂಥದಲ್ಲಿ ಒಂದು ವಿಸ್ತಾರವಾದ ಅಧ್ಯಯನ ಪೂರ್ಣವಾದ ಪೀಠಿಕೆಯನ್ನು ಶ್ರೀ ಭಟ್ಟರು ಬರೆದಿದ್ದಾರೆ. ತಮಗಿಂತ ಮೊದಲು ಪಾರ್ತಿಸುಬ್ಬನ ಬಗ್ಗೆ ಬರೆದ ವಿದ್ವಾಂಸರನ್ನು ಉಲ್ಲೇಖಿಸಿ ಅವರ ಹೇಳಿಕೆಗಳ ಸಾರಾಂಶವನ್ನೂ ಕೊಟ್ಟಿದ್ದಾರೆ. ಮಂಜೇಶ್ವರ ಗೋವಿಂದ ಪೈಗಳು ಈ ಬಗ್ಗೆ ಮದರಾಸು ಆಕಾಶವಾಣಿ ಕೇಂದ್ರದಲ್ಲಿ ಭಾಷಣ ಮಾಡಿದ್ದರು (೧೯೪೯), ಮಂಗಳೂರಿನಿಂದ ಹೊರಡುತ್ತಿದ್ದ ನವಭಾರತ ದಿನಪತ್ರಿಕೆಯಲ್ಲಿ ಲೇಖನವನ್ನು ಬರೆದಿದ್ದರು. ಮಧೂರು ದೇವಳದ 'ಮಧುಪುರ' ವಿಶೇಷ ಸಂಚಿಕೆಯಲ್ಲಿ ಲೇಖನವನ್ನು ಪ್ರಕಟಿಸಿದ್ದರು. ಈ ಮೂರೂ ಕೃತಿಗಳ ಸಾರಾಂಶ 'ಯಕ್ಷಗಾನದ ಗುರುವೂ ಆಚಾರ್ಯನೂ ಆದ ಪಾರ್ತಿಸುಬ್ಬನೆಂದರೆ ಪಾರ್ವತಿಯ ಮಗ ಸುಬ್ಬನೇ ವಿನಾ ಅನ್ಯನಲ್ಲವೆಂದು ಬೇಕಾದಷ್ಟು ನಿಷ್ಕೃಷ್ಟವಿರುತ್ತದೆ. ಆತನು ಕುಂಬಳೆಯ ಪಾಟಾಳಿಗಳ ಮನೆತನದವನು. ಕುಂಬಳೆಯ ಬಯಲಾಟ ಮೇಳದಲ್ಲಿ ಭಾಗವತನಾಗಿದ್ದನು. ತಿರುವಾಂಕೋಡು ರಾಜ್ಯದಲ್ಲಿ ವಿದ್ಯಾಭ್ಯಾಸ ಮಾಡಿದವನು. ಅಲ್ಲಿಯ ಕೂತ್ತುಕಳಿಗಳ ಬಗೆಯವೇ ವೇಷಗಳನ್ನು ನಮ್ಮ ತುಳುನಾಡಿನ ಯಕ್ಷಗಾನದಲ್ಲಿ ರೂಪಿಸಿದವನು. ರಾಮಾಯಣದಲ್ಲಿ ಪಟ್ಟಾಭಿಷೇಕದಿಂದ ಇಂದ್ರಜಿತು ಕಾಳಗದವರೆಗಿನ ಯಕ್ಷಗಾನ ಪ್ರಸಂಗಗಳನ್ನಾದರೂ ಅವನು ರಚಿಸಿದ್ದೆಂಬ ನಿರ್ಣಯವಿದೆ. ಕೃಷ್ಣ ಬಾಲಲೀಲೆಯು

ಇವನ ರಚನೆಯೆಂದು ಪ್ರತೀತಿಯಿದೆ. ಯಕ್ಷಗಾನ ಆಟಗಳಿಗೆ ಮೂಲಾಧಾರವಾಗಿರುವ 'ಸಭಾಲಕ್ಷಣ'ವೆಂಬ ಉತ್ತಮ ಗ್ರಂಥವನ್ನು ಅವನೇ ರಚಿಸಿದನೆಂದೂ ಹೇಳುತ್ತಾರೆ..... ಈಗ ಸುಮಾರು ೧೬೪ ವರ್ಷಗಳ ಹಿಂದೆ ಮಧೂರು ಗಣಪತಿ ದೇವಸ್ಥಾನದಲ್ಲಿ ನಡೆದಿದ್ದ ಮೂಡಪ್ಪ ಸೇವೆಯಲ್ಲಿ ಭಾಗವಹಿಸಿದನೆಂಬುದಕ್ಕೆ ಅಲ್ಲಿಯ ಓಲೆಗರಿಯದೇನೋ ಪ್ರತಿಯಲ್ಲಿ ಇದ್ದುದನ್ನು ಕೇಳಿದ್ದೇನೆ." (ಪೀಠಿಕೆ, ಪು.xx)

ಮುಳಿಯದವರು ಮಾಡಿದ ಅಧ್ಯಯನವನ್ನು ಉಲ್ಲೇಖಿಸಿ "ಯಕ್ಷಗಾನ ಮೇಳದಲ್ಲಿ ಭಾಗವತನಾಗಿ ಕುಂದಾಪುರ ತಾಲೂಕಿನವರೆಗೂ ಸಂಚಾರ ಕೈಗೊಂಡಿದ್ದ ಅಲ್ಲಿಯ ಅಣೆಯ ಗುಡ್ಡೆಯ ವಿಘ್ನೇಶ್ವರನ ಮುಂದೆ ಒಂದು ಸ್ತುತಿಕೀರ್ತನಾ ದಯಮಾಡೋ ವಿಘ್ನರಾಜ ಸುಬ್ಬನ ಮೇಲೆ.... ರಚಿಸಿದ ಹಾಡಿದ ವಿಚಾರ"ವನ್ನು ಕುಕ್ಕಿಲರು ಉಲ್ಲೇಖಿಸುತ್ತಾರೆ (ಪೀಠಿಕೆ, xx)

ಬಡಗಬೈಲು ಪರಮೇಶ್ವರಯ್ಯ (ಉಡುಪಿ ತಾಲೂಕು ಪೊಳಲಿ)ನವರು 'ತುಳು ಕೃಷ್ಣ ಸಂಧಾನ' ಬರೆದ ಮುನ್ನುಡಿಯ ಒಂದೆರಡು ಸಾಲುಗಳನ್ನು ಕೃಷ್ಣಭಟ್ಟರು ಉದ್ಧರಿಸಿದ್ದಾರೆ. "ಪಾರ್ವತಿಯ ಮಗ ಸುಬ್ಬನೇ ಪಾರ್ತಿಸುಬ್ಬ. ಕಣಿಪುರದ ಕೃಷ್ಣ ದೇವಾಲಯದ ಪಾಟಾಳಿಯಾಗಿದ್ದ ಅವನಿಂದಲೇ ತುಳುನಾಡಿನಲ್ಲಿ ಯಕ್ಷಗಾನವೆಂಬುದು ಉದಯಕ್ಕೆ ಬಂದುದಾಗಿದೆ. ಆತನು ತುಳುವಿನಲ್ಲಿಯೂ ಅನೇಕ ಕವಿತೆಗಳನ್ನು ರಚಿಸಿದ್ದನು. ಕಣಿಪುರದ ಕೃಷ್ಣನ ಅಂಕಿತವಿರುವ ಆ ಕೀರ್ತನೆಗಳನ್ನು ತುಳು ಜನರ ಬಾಯಿಂದ ಇಂದೂ ಕೇಳಬಹುದು." (೧೯೦೫ರಲ್ಲಿ ಭಿಕ್ಷುಕನೊಬ್ಬ ಕಾರ್ಕಳದಲ್ಲಿ ಹಾಡಿದ್ದನ್ನು ತಾವು ಕೇಳಿದ ಪುರಾವೆ.)

ಇನ್ನು ಕವಿಭೂಷಣ ಕೆ.ಪಿ.ವೆಂಕಟಪ್ಪ ಶೆಟ್ಟಿಯವರು 'ರಾಜಾ ರಾಣಸಿಂಹ' ಎಂಬ ಯಕ್ಷಗಾನದಲ್ಲಿ ಬರೆದ ಮಾತುಗಳನ್ನು ಶ್ರೀ ಕುಕ್ಕಿಲರು ಉಲ್ಲೇಖಿಸಿದ್ದಾರೆ. "ಕಣಿಪುರದ ಪಾರ್ತಿಸುಬ್ಬ ಕವಿಯೇ ತುಳುನಾಡಿನಲ್ಲಿ ಯಕ್ಷಗಾನವನ್ನು ಪ್ರಯೋಗಕ್ಕೆ ತಂದ ಮೂಲಪುರುಷನು. ಅದಕ್ಕೆ ಸೂತ್ರ ರೂಪದಂತಿರುವ ಸಭಾಲಕ್ಷಣವೆಂಬ ಕೈಪಿಡಿಯನ್ನೂ ರಾಮಾಯಣ ಯಕ್ಷಗಾನಗಳನ್ನೂ ರಚಿಸಿ 'ಯಕ್ಷಗಾನ ವಾಲ್ಮೀಕಿ' ಎಂದು ಬಿರುದಾಂಕಿತನಾಗಿದ್ದನು. ಮಲಬಾರಿನ ಕಥಕಳಿ ಪ್ರಯೋಗವನ್ನೇ ದಕ್ಷಿಣ ಕನ್ನಡದಲ್ಲಿ ಯಕ್ಷಗಾನವಾಗಿ ಪರಿವರ್ತಿಸಿದವನು."

ಹೀಗೆಯೇ ಕವಿ ಮುಂಡೂರು ದಾಮೋದರ ಪುಣಿಚಿತ್ತಾಯರು (ಕಾಸರಗೋಡು), ಬಿ.ರಂಗಪ್ಪಯ್ಯ (ಪುತ್ತೂರು), ಕೈಯಾರ ಕಿಞ್ಞಣ್ಣ ರೈಯವರು (ಮಧುಪುರ ಗ್ರಂಥದಲ್ಲಿ)

ಮುಂತಾದವರು ಪಾರ್ತಿಸುಬ್ಬನ ಕುರಿತು ಬರೆದುದನ್ನು ದಾಖಲಿಸುತ್ತಾರೆ. ಕರ್ನಾಟಕ ಕವಿಚರಿತೆಯಲ್ಲೂ ಪಾರ್ತಿಸುಬ್ಬನು ಕುರಿತು ಬಂದಿರುವ ಮಾತುಗಳನ್ನು ಎತ್ತಿಕೊಂಡಿದ್ದಾರೆ.

ಮೌಖಿಕ ಹೇಳಿಕೆಯೊಂದನ್ನೂ ಶ್ರೀ ಭಟ್ಟರು ಇದೇ ಪೀಠಿಕೆಯಲ್ಲಿ ಉಲ್ಲೇಖಿಸಿದ್ದಾರೆ. ಅದು ನಾರಂಪಾಡಿ ಪಾಟಾಳಿ ಸುಬ್ಬರಾಯರ ಮಗ ನಿವೃತ್ತ ವೇಷಧಾರಿ ರಾಮಯ್ಯ ಎಂಬುವವರದು. ಅದು ಹೀಗಿದೆ – "ಪಾರ್ತಿಸುಬ್ಬನು ನಮ್ಮ ವಂಶದ ಹಿರಿಯನು. ಅವನ ಪೀಳಿಗೆಯಲ್ಲಿ ಈಗ ನಮ್ಮದು ಒಂದೇ ಮನೆಯಿರುವುದು. ಕಣಿಪುರ ಕೃಷ್ಣ ದೇವಸ್ಥಾನದ ಒತ್ತಿನಲ್ಲಿ ನಮ್ಮ ಮೂಲದ ತರವಾಡು. (ಕುಟುಂಬದ ಮನೆ) ಇದ್ದದ್ದು. ಆ ಹಿತ್ತಿಲಿಗೆ 'ಪಾರ್ತಿಸುಬ್ಬನ ಹಿತ್ತಿಲು' ಎಂದೇ ಕರೆಯುವ ರೂಢಿಯಾಗಿತ್ತು ಎಂದರೆ ಅದು ಅವನ ಹೆಸರ ವರ್ಗದ್ದು. ಸುಮಾರು ಎಂಭತ್ತು ತೊಂಭತ್ತು ವರ್ಷಗಳ ಹಿಂದೆ ಇರಬಹುದು, ಆ ಹಿತ್ತಿಲು ಕೂಡಲು ಶಾನುಭಾಗರ ಮನೆಯವರಿಗೆ ಹೋಗಿದೆ. ಪಾರ್ತಿಸುಬ್ಬನು ಕಥಕಳಿಯಲ್ಲಿ ಭಾಗವತನಾಗಿದ್ದನಂತೆ. ಅವನ ತಮ್ಮನು ಹನುಮನ ವೇಷದಲ್ಲಿ ಪ್ರಸಿದ್ಧನಾಗಿದ್ದು ಅನಂತಶಯನ ಅರಸರಿಂದ ಮನ್ನಣೆ ಪಡೆದಿದ್ದ. ಸುಬ್ಬನು ರಾಮಾಯಣ ಪ್ರಸಂಗಗಳನ್ನಲ್ಲದೇ ಕೃಷ್ಣ ಚರಿತೆಯನ್ನೂ ಐರಾವತನನ್ನೂ ರಚಿಸಿದ್ದನು. ಕುಂಬಳೆಯಲ್ಲಿ ದಶಾವತಾರ ಮೇಳ ಅವನಿಂದ ಸುರುವಾದದ್ದಂತೆ.

ಈ ಹಿರಿಯ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಗೊಳಿಸಿ ಸಮನ್ವಯ ಮಾಡಿದ ಕುಕ್ಕಿಲರು ಹೀಗೆ ನಿರ್ಣಯಿಸುತ್ತಾರೆ – "ಈ ಹೇಳಿಕೆಗಳಲ್ಲಿ ಕಂಡು ಬರುವ ವಿಚಾರಗಳಲ್ಲಿ ಕಲ್ಪಿತ ಅಥವಾ ಅತಿಶಯೋಕ್ತಿ ಇರುವುದಿಲ್ಲವೆಂಬುದು ಆತನ ಗ್ರಂಥಗಳಲ್ಲಿ ಪರಿಶೀಲಿಸಿದಲ್ಲಿ ಕಂಡುಬರುವುದು. ಸಭಾಲಕ್ಷಣವೆಂಬುದು ಯಕ್ಷಗಾನ ಆಟದಲ್ಲಿ ಮೊದಲಾಗಿ ನಡೆಯಲಿರುವ ಪೂರ್ವರಂಗ ವಿಧಿಯಾಗಿರುತ್ತದೆ. ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಯಾವತ್ತೂ ದಶಾವತಾರ ಆಟಗಳು ಸಭಾಲಕ್ಷಣ ಪೂರ್ವಕವಾಗಿಯೇ ನಡೆಯುವಂಥವು."

ಕಥಕಳಿಯೊಂದಿಗೆ ಸುಬ್ಬನಿಗಿರುವ ಸಂಬಂಧವನ್ನು ವಿವೇಚಿಸುತ್ತಾ – 'ಕಥಕಳಿಯ ಮೂಲ ಪ್ರವರ್ತಕನಾದ ಬಾಲಕೇರಳವರ್ಮನೆಂಬ 'ಕೊಟ್ಟಾರಕ'ದ ರಾಜನಿಂದ ರಚಿಸಲ್ಪಟ್ಟ ಮಲೆಯಾಳ ರಾಮಾಯಣ ಕೃತಿಗಳನ್ನು ಪರಿಶೀಲಿಸಿದಲ್ಲಿ ಸುಬ್ಬನು ತನ್ನ ರಾಮಾಯಣ ಕೃತಿಗಳ ರಚನೆಯಲ್ಲಿ ಆ ಪ್ರಬಂಧಗಳನ್ನು ನೆರಳಂತೆ ಅನುಸರಿಸಿರುವುದು ವ್ಯಕ್ತವಾಗುವುದು. ಅದರ ಎಷ್ಟೋ ಪದ್ಯಗಳು ಇವನ ಕೃತಿಗಳಲ್ಲಿ ಯಥಾರೂಪ ಅನುವಾದವಾಗಿಯೂ ಬಂದಿವೆ. ಕನ್ನಡಕ್ಕೆ ಅಪೂರ್ವವಾದ ಕೆಲವೊಂದು ಪದ್ಯರೂಪಗಳು ವೃತ್ತಬಂಧಗಳೂ ಅದರಲ್ಲಿದ್ದವಂಥವನ್ನೇ ಈತನು ಬಳಸಿಕೊಂಡಿದ್ದಾನೆ." ಈ ಹೇಳಿಕೆಯನ್ನು ಶ್ರೀಯುತರು ಅನೇಕ ಉದಾಹರಣೆಗಳ ಮುಖೇನ ಸಾಧಿಸಿದ್ದಾರೆ. (ಪೀಠಿಕೆ ಪು. xxiii)

ಕನ್ನಡಕ್ಕೆ ಸಹಜವಲ್ಲದ ವೃತ್ತ ಜಾತಿಗಳ ಬಳಕೆಯ ಹೊಲಬನ್ನು ಹುಡುಕುತ್ತಾ "ಇಂಥ ವೃತ್ತ ವಿಶೇಷಗಳು ಮೂಲತಃ ದ್ರಾವಿಡ ಛಂದಸ್ಸಿನಲ್ಲಿ ಇದ್ದಂಥವು. ಅಲ್ಲಿ ಅವಕ್ಕೆ 'ಅರುಶೀರಡಿಯ ಆಶಿರಿಯ ವಿರುತ್ತ'ಗಳೆಂದು ಹೆಸರು. ತಮಿಳು 'ಕಂಭ ರಾಮಾಯಣ'ದಲ್ಲಿದ್ದಂಥ ಈ ವೃತ್ತಗಳನ್ನು ಅನುಸರಿಸಿದ ಕಥಕಳಿಕಾರನು ಗಣನಿಯಮವನ್ನು ಒಂದಿಷ್ಟು ಶಿಥಿಲಗೊಳಿಸಿ ತನ್ನ ಕೃತಿಗಳಲ್ಲಿ ಪ್ರಯೋಗಿಸಿದ್ದಾಗಿದೆ" ಎಂಬ ಪಿ.ಕೃಷ್ಣನ್ ನಾಯರ್ ಅಭಿಪ್ರಾಯ (ಆಟ್ಟಕಥಾ ಕೃತಿ)ವನ್ನು ಉಲ್ಲೇಖಿಸುತ್ತಾರೆ. ಮಲೆಯಾಳ ಛಂದಸ್ಸಿನಲ್ಲಿ ಪ್ರಸಿದ್ಧವಾದ ಕೇಕಯ ವೃತ್ತದಂತಿದೆ ಎಂದು ಹೇಳುತ್ತಾರೆ. ಪಾರ್ತಿಸುಬ್ಬನ ಸಭಾಲಕ್ಷಣದಲ್ಲಿಯೂ ಈ ಬಗೆಯ ವೃತ್ತಗಳನ್ನು ಬಳಸಿರುವುದನ್ನು ತೋರಿಸುತ್ತಾರೆ.

ಸುಬ್ಬನು ತಿರುವಾಂಕೂರಿನಲ್ಲಿ ವಿದ್ಯಾಭ್ಯಾಸ ಮಾಡಿರಬಹುದೆಂಬುದಕ್ಕೆ ಆಧಾರವಾಗಿ ಆತನು ಸಭಾಲಕ್ಷಣದಲ್ಲಿ ಬರೆದಿರುವ ಅನ್ನಪೂರ್ಣೇಶ್ವರಿಯ ಸ್ತುತಿಪದ್ಯವನ್ನು ಆಧಾರವಾಗಿ ಭಟ್ಟರು ಕೊಡುತ್ತಾರೆ. ('ಶರಣುತಿರುವಗ್ರಶಾಲಿ ವಾಹಿನಿ... ಶರಣು ಶಂಕರಿ... ದೇವರಡಿ ಪಣಿಕಾರಿಣೀ..)" ದ್ರಾವಿಡ ಕೇರಳಗಳಲ್ಲಿ 'ಅಯ್ಕೆ' ಎಂದು ಪೂಜಿಸಲ್ಪಡುವ ದುರ್ಗೆಯು 'ಶಾಲಿವಾಹಿನಿ' ಅಥವಾ 'ಶಾತವಾಹಿನಿ' ಎಂದೂ 'ಅಯ್ಯನ್' ಅಥವಾ ಅಯ್ಯನಾರ್ (ಹರಿಹರಾತ್ಮಜ) ಎಂಬ ದೇವರು ಶಾತವಾಹಿನಿ ಅಥವಾ ಶಾಲಿವಾಹಿನಿ ಎಂದೂ ಕರೆಯಲ್ಪಡುತ್ತಾರೆ" ಎಂಬ ಪುಲಿಯೂರು ಕೇಶಿನ್ (ಶಿಲಪ್ಪದಿಕಾರಂ ವ್ಯಾಖ್ಯಾನ) ಅವರ ಮಾತನ್ನು ಆಧಾರವಾಗಿ ನೀಡುತ್ತಾರೆ.

ಸುಬ್ಬನು ರಚಿಸಿದ 'ಐರಾವತ' ಪ್ರಸಂಗವನ್ನು ಪರಿಶೀಲಿಸಿ, ಅದರಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಸ್ತುತಿಸುವ ವಾಕ್ಯಗಳ ಆಧಾರದಲ್ಲಿ ಆತನು ದೇವಸ್ಥಾನದ ಪಾಟಾಳಿಯಾಗಿದ್ದನು ಎಂದು ಭಾವಿಸುತ್ತಾರೆ. ಯಾಕೆಂದರೆ ಈ ಸ್ತುತಿಪಾಠಗಳು ಕುಂಬಳೆ ಕೃಷ್ಣ ದೇವಸ್ಥಾನದ ಪಾಟಾಳಿಗಳು ಬಳಸುವಂಥವೇ ಆಗಿವೆ ಎಂದು ಗುರುತಿಸುತ್ತಾರೆ.

ಸುಬ್ಬನು ತೊರವೆ ರಾಮಾಯಣಕ್ಕೂ ಹೇಗೆ ಋಣಿಯೆಂಬುದನ್ನು ಕುಕ್ಕಿಲದವರು ಗುರುತಿಸುತ್ತಾರೆ. "ಕಥಕಳಿ ರಾಮಾಯಣದಲ್ಲಿ ಇಲ್ಲದಿರುವ ಹಾಗೂ ಸಂಕ್ಷೇಪವಾಗಿರುವ ಭಾಗಗಳನ್ನು ವಿಸ್ತರಿಸುವಲ್ಲಿ ಆತನು ತೊರವೆಯನ್ನು ಅನುಸರಿಸಿದ್ದು ಕಾಣುವುದು. ಉದಾ: ಸೇತುಬಂಧನ, ಅಂಗದ ಸಂಧಾನ, ಸೀತಾ ಕಲ್ಯಾಣ ಪ್ರಸಂಗ ರಚನೆಯಲ್ಲಿ ತೊರವೆ ರಾಮಾಯಣವನ್ನು ಸುಬ್ಬನು ನೆಚ್ಚಿದ್ದಾನೆ. ಲಕ್ಷ್ಮೀಶನ ಜೈಮಿನಿ ಭಾರತವನ್ನು ಅನುಸರಿಸಿ ಕುಶಲವರ ಕಾಳಗವನ್ನು ಸುಬ್ಬ ರಚಿಸಿದ್ದಾನೆ. ಭಾಗವತ ಪುರಾಣದ ದಶಮಸ್ಕಂದದ ಆಸರೆಯಲ್ಲಿ 'ಕೃಷ್ಣ ಚರಿತೆ'ಯನ್ನು ಬರೆದಿದ್ದಾನೆಂಬುದು ಕುಕ್ಕಿಲರ ಅಭಿಮತ. ತಮ್ಮ ಅಭಿಪ್ರಾಯವನ್ನು ಸೋದಾಹರಣ ವಿವರಿಸಿದ್ದಾರೆ ಕೂಡಾ. ಐರಾವತ ಪ್ರಸಂಗವನ್ನು ಬರೆಯುವ ವೇಳೆ 'ಗದುಗಿನ ಭಾರತ'ವನ್ನು ಹಿಂಬಾಲಿಸಿದ್ದಾನೆಂದೂ ಸೋದಾಹರಣ ತಿಳಿಸುತ್ತಾರೆ.

ಇನ್ನು ರಾಮಾಯಣದ ಪ್ರಸಂಗಗಳನ್ನು ಸುಬ್ಬನೇ ರಚಿಸಿದ್ದಾನೆಂಬುದಕ್ಕೆ ಒಂದೇ ವಿಧದ ಪದರಚನೆಗಳನ್ನುಳ್ಳ ಪದ್ಯಗಳನ್ನು ಹುಡುಕಿ ಹೊರತೆಗೆದು ಕುಕ್ಕಿಲರು ನೀಡುತ್ತಾರೆ.

ಪಾರ್ತಿಸುಬ್ಬನ ಕೃತಿಗಳಲ್ಲಿ ಸಾಮಾನ್ಯವಾಗಿ ಬಂದಿರುವ ನಾಣ್ಣುಡಿಗಳ ಪಟ್ಟಿಯನ್ನೇ ಕುಕ್ಕಿಲರು ಮಾಡಿಕೊಟ್ಟಿದ್ದಾರೆ.

ಗಾಳಿ ಸಿಡಿಲು ಮಳೆ ಹೊಡೆಯಬೇಡೆಂದು ತಾ ತೋಳನೆತ್ತಿದರೆ ನಿಲ್ಲುವುದೇ?

ಬೇರು ಕಡಿದ ಮೇಲೆ ವೃಕ್ಷ ಜಾರದೆ ನಿಲ್ಲುವುದಂಟೆ?

ಮಂಡೆ ಘಟ್ಯಾದರೆ ಮರಕೆ ಜೆಪ್ಪುವುದುಂಟೆ?

ಕಳವೂ ಹಾದರವೂ ಮುದ್ದಲ್ಲ.

ಹಾಳೂ ಬಾವಿಗೆ ಕೋಪಿಸಿ ಹಾರಿದರೆ ದಡಹತ್ತಲರಿದು.

ಊಳಿಗವ ಮಾಡುವಂಗೂರ ಮಾತುಗಳೇಕೆ?

ಕಾಡಿನೊಳಗೆ ಹುಲಿಯಿರುವ ಸುದ್ದಿಯ ಕೇಳಿ ನಾಡಿಂದೊಕ್ಕಲ್ ತೆಗೆಯುವರೆ?

ಎಂದಿಗಾದರೀ ಶರೀರ ಎರವಿನ ಹಾರ.

ಹುಲಿಯ ಮಕ್ಕಳು ಹೊಲ ಹುಲ್ಲ ಮೇಯುವವೆ?

ಅತ್ತು ಸಾವವರುಂಟೆ ಸತ್ತವರ ಕೂಡೆ

ಬಾಂದವರಿಗೆ ಕೊಲೆ ತಪ್ಪದು.

ಸಾರಿ ಕೊಂದರೆ ಪಾಪವಿಲ್ಲ.

– ಇತ್ಯಾದಿ ಸುಂದರ ವಾಕ್ಯಗಳು ಸುಬ್ಬನ ಪ್ರತಿಭಾ ದರ್ಶನಕ್ಕೆ ನಿದರ್ಶನಗಳಾಗಿವೆ. ಇನ್ನು ಕುಕ್ಕಿಲರು ಸುಬ್ಬನು ಪಟ್ಟಾಭಿಷೇಕ ಪ್ರಸಂಗದಲ್ಲಿ ಬರೆದಿರುವ ಬತ್ತೀಸಾಕೃತಿ ರಾಗತಾಳ ವಿಧದಿಂ ರಾಮಾಯಣಂ ಪೇಳ್ವುದ ಎಂಬ ಪದ್ಯಖಂಡವನ್ನೆತ್ತಿಕೊಂಡು ವಿಸ್ತಾರವಾಗಿ ವಿಮರ್ಶಿಸಿದ್ದಾರೆ. ಕಥಕಳಿಯನ್ನೂ ಆಧರಿಸಿ ಪ್ರಸಂಗರಚನೆ ಮಾಡಿದ ಸಂದರ್ಭಗಳಲ್ಲಿ ಅಲ್ಲಿನ ರಾಗತಾಳಗಳನ್ನು ಬಳಸಿದ್ದಾನೆ. ಕ್ರಮೇಣ ಸ್ವಂತಿಕೆ ಹೆಚ್ಚಿದ ಮೇಲೆ ಕರ್ನಾಟಕ ಸಂಗೀತದ ರಾಗತಾಳ ವಿಧಗಳನ್ನು ಪೂರ್ವಸಂಪ್ರದಾಯದಂತೆ ಬಳಸಿದ್ದಾನೆಂದು ಗುರುತಿಸುತ್ತಾರೆ.

ರಾಗಗಳ ಬಳಕೆಯ ಆಧಾರದಿಂದಲೂ ಸುಬ್ಬ ಹದಿನೆಂಟನೇ ಶತಮಾನದ ಆರಂಭಕ್ಕಿಂತ ಮೊದಲಿನವನೆಂದೂ ಶ್ರೀಯುತರು ಕಲ್ಪಿಸುತ್ತಾರೆ. ಇನ್ನು ೭೨ ಮೇಳಕರ್ತ ರಾಗಪದ್ಧತಿ ಆರಂಭವಾಗುವ ಮೊದಲೇ ಸುಬ್ಬನಿದ್ದಿರಬೇಕೆಂದು ಅವರ ಭಾವನೆ. ಅವನಲ್ಲಿ ಜನಕರಾಗ ಜನ್ಯರಾಗವಿಲ್ಲವೆಂದು ಸಮರ್ಥನೆ ನೀಡುತ್ತಾರೆ. ಸಂಗೀತದಲ್ಲಿ ವೆಂಕಟಮುಖಿಯವರಿಗಿಂತ ಹಿಂದಿನವನು ಸುಬ್ಬ–

"ಸುಬ್ಬನ ಕೃತಿಗಳಲ್ಲಿ ಕಾಣುವ ರಸಾನುಗುಣವಾದ ರಾಗನಿರ್ದೇಶನವನ್ನು ಪರಿಶೀಲಿಸಿದಲ್ಲಿ ಅದು ಪುಂಡರೀಕವಿಠಲನ ರಾಗಲಕ್ಷಣಗಳನ್ನು ಅನುಸರಿಸಿದ್ದಂತೆ ಕಾಣುವುದು" (ಪೀಠಿಕೆ, ಪುಟ.  ) ಎನ್ನುತ್ತಾ–

"ಸುಬ್ಬನ ಯಕ್ಷಗಾನದ ತಾಳಗಳಾದರೆ ಪೂರ್ವಸಂಪ್ರದಾಯದಲ್ಲಿರುವಂಥವು. ಆ ೭೨ ತಾಳಭೇದಗಳು ಮಾತ್ರಗಣನೆಯಲ್ಲಿ ಈಗಿನ ಸಪ್ತತಾಳಗಳೊಳಗೆ ಅಡಕಗೊಳ್ಳುವುದಾದರೂ ಗುರು–ಲಘು ವಿನ್ಯಾಸಗಳಲ್ಲಿ ಭಿನ್ನ ಸ್ವರೂಪಗಳನ್ನು ಪಡೆದಿರುತ್ತದೆ. ಎಂದರೆ ಆ ತಾಳಗಳ ಪ್ರತಿಯೊಂದು ಗುರು, ಲಘು, ದ್ರುತಗಳು ಸಶಬ್ದ ಕ್ರಿಯೆ (ಪೆಟ್ಟುಗಳಿಂದ) ನಿರೂಪಿಸಲ್ಪಡುವಂಥವು; ಆದ್ದರಿಂದ ಮಾತ್ರಾಸಂಖ್ಯೆ ಒಂದೇ ಆಗಿದ್ದರೂ ಗುರು–ಲಘು ವಿನ್ಯಾಸಗಳನ್ನು ಹೊಂದಿಕೊಂಡು ಪೆಟ್ಟುಗಳು ಭಿನ್ನಕ್ರಮದಲ್ಲಿ ಬೀಳುವುದರಿಂದ ತಾಳದ ಸ್ವರೂಪಗಳು ಬೇರೆ ಬೇರೆ ಹೆಸರಿನ ತಾಳಭೇದಗಳಾಗಿ ಪರಿಗಣಿಸಲ್ಪಟ್ಟಿರುವುದನ್ನು ಕಾಣಬಹುದು. ಪಾರ್ತಿಸುಬ್ಬನು ಹೇಳುವ ಬತ್ತೀಸರಾಗಗಳೆಂದರೆ ಅಂಥ ೩೨ ದೇಶೀ ತಾಳಭೇದಗಳಾಗಿವೆ. ಕುಂಬಳೆ ಸಂಪ್ರದಾಯದ ಯಕ್ಷಗಾನದಲ್ಲಿ ಅವು ಇಂದಿಗೂ ಉಳಿದುಬಂದಿರುವುದನ್ನು ಲಕ್ಷಿಸಬಹುದು. ಆ ಪ್ರಕಾರ ಚತುರಶ್ರ ಏಕತಾಳದಲ್ಲಿ ೮, ತ್ರಿವುಡೆಯಲ್ಲಿ ೪, ಝಂಪೆಯಲ್ಲಿ ೫, ಅಷ್ಟದಲ್ಲಿ ೪, ರೂಪಕದಲ್ಲಿ ೩, ಮಟ್ಟೆಯಲ್ಲಿ ೫ರಂತೆ ಭೇದಗಳು ಇವೆ. ಆದಿತಾಳ, ಚೌತಾಳ (೧೬ ಅಕ್ಷರ ಕಾಲದವು), ತಿತ್ತಿತ್ತೈ ತಾಳ (ಮೂರುವರೆ ಮಾತ್ರಕಾಲ) – ಇವು ಹೀಗೆ ಒಟ್ಟು ೩೨ ತಾಲಗಳಾಗುತ್ತವೆ. ಕುಕ್ಕಿಲರು ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ಪ್ರಯೋಗವಾಗಿರುವ ಬಗೆಯನ್ನು

ಖಚಿತಪಡಿಸಿದ್ದಾರೆ. “ಹೀಗೆ ಶಾಸ್ತ್ರಸಿದ್ಧವಾದ ‘ಬತ್ತೀಸಾಕೃತಿ’–೩೨ ಸ್ವರೂಪಗಳುಳ್ಳ ರಾಗ ಮತ್ತು ತಾಳಗಳಲ್ಲಿ ತಾನು ರಚಿಸಿದ ‘ಕನ್ನಡ ಯಕ್ಷಗಾನಗಳನ್ನು’, ‘ಭೂಮಿಯೊಳು ರಾಗತಾಳವರಿತು ಪಾಡಿದರೆ’ ಆ ಮಹಾಪುರ ಕಣ್ವಪುರ ಕೃಷ್ಣ ಸಲಹುವನೆಂದೆನ್ನುವ ಈತನು ಬರಿಯ ಪಾಟಾಳಿಯಲ್ಲ. ಗಂಧರ್ವಶಾಸ್ತ್ರದ ಲಕ್ಷ್ಯ ಲಕ್ಷಣಗಳನ್ನು ಬಲ್ಲವನಾಗಿದ್ದ ಹಿರಿಯ ವಾಗ್ಗೇಯಕಾರನೇ ಸರಿ. ಆತನಿಂದುಳಿದು ಈ ವಿಶುದ್ಧ ಕರ್ಣಾಟಕ ಸಂಗೀತದ ಉನ್ನತ ಶಾಸ್ತ್ರೀಯ ಸಂಪ್ರದಾಯವನ್ನು ಇಂದು ಜಾನಪದಕ್ಕೆ ತಳ್ಳುತ್ತಿರುವುದು ವ್ಯಸನಕರ” ಎಂದು ಅಭಿಪ್ರಾಯಪಡುತ್ತಾರೆ.

ಪಾರ್ತಿಸುಬ್ಬನ ಕಾಲವಿಚಾರದಲ್ಲಿ ಕುಕ್ಕಿಲರು ಕ್ರಿ.ಶ.೧೫೫೦–೧೬೨೦ ಅವನು ಯಕ್ಷಗಾನ ಕೃತಿರಚನೆ ಮಾಡಿರಬೇಕು ಎಂದು ಸತಾರ್ಕಿಕವಾಗಿಯೂ ಕೆಲವು ಸಾಕ್ಷ್ಯಾಧಾರಗಳ ಸಮೇತವೂ ಮಂಡಿಸಿದ್ದಾರೆ. ‘ಕುಶಲವರ ಕಾಳಗ’ ಪ್ರತಿಮಾಡಿದ ಕಾಲ, ‘ಐರಾವತ’ ಪ್ರತಿಯಾದ ಕಾಲ ಮತ್ತು ಅದರಲ್ಲಿ ಬಂದಿರುವ ‘ಗಜಗೌರಿ ಸಂಕಲ್ಪ’ದ ಕಾಲ ಇತ್ಯಾದಿಗಳನ್ನು ಗುರುತಿಸಿದ್ದಾರೆ.

ಮಧೂರು ಮೂಡಪ್ಪ ಸೇವೆ (೧೭೮೭)ಯ ದಾಖಲೆಗಳಲ್ಲಿ ಕಂಡುಬರುವ ಕಣಿಪುರ ಪಾರ್ತಿಸುಬ್ಬನು ಇವನಲ್ಲ ಎಂದು ಕುಕ್ಕಿಲರ ಅಭಿಮತ. ಈ ಹಿಂದೆ ಭಾವಿಸಲಾದ ಕೋರ್ಟು ದಾಖಲೆಗಳು ಆಸ್ತಿ ಪರಭಾರೆ ಆಧಾರ, ಗೇಣಿಚೀಟು ದಾಖಲೆಗಳಲ್ಲಿ ಬರುವ ಸುಬ್ಬನು ಕವಿ ಪಾರ್ತಿಸುಬ್ಬನಲ್ಲ. ಇದಕ್ಕೆ ಕೂಡಲು ಈಶ್ವರ ಶಾನುಭೋಗರು ನೀಡಿದ ದಾಖಲೆ ಪತ್ರಗಳ ಆಧಾರವನ್ನು ನೀಡುತ್ತಾರೆ.

ಇಷ್ಟಲ್ಲದೆ ತಾವು ಅಧ್ಯಯನಗಳಿಗೆ ಬಳಸಿದ ಪಾರ್ತಿಸುಬ್ಬನ ಕೃತಿಗಳ ವಿವಿಧ ಓಲೆಗಳು ಪ್ರತಿಗಳು ಎಲ್ಲಿಂದ ಯಾರಿಂದ ದೊರೆತಿದೆ ಎಂಬುದು ಸುದೀರ್ಘ ಪಟ್ಟಿಯನ್ನೂ ಪೀಠಿಕೆಯಲ್ಲಿ ಕೊಟ್ಟಿದ್ದಾರೆ. ಸಪ್ರಮಾಣ ತನ್ನ ವಾದವನ್ನು ಮಂಡಿಸುವುದು ಕುಕ್ಕಿಲರ ರೀತಿ, ದಾಖಲೆಗಳ ಚಿತ್ರಗಳು, ಓಲೆಗರಿ ಗ್ರಂಥಗಳ ವಿವರ, ಕಾಗದದ ಹಸ್ತಪ್ರತಿಗಳು, ಅಚ್ಚಾದ ಪ್ರತಿಗಳು ಹೀಗೆ ನೂರಾರು ವಿವರಗಳನ್ನು ಓದುಗರಿಗೆ ಒದಗಿಸಿದ್ದಾರೆ. ಪೀಠಿಕೆಯ ಅನಂತರದಲ್ಲಿ ಪ್ರತಿಯೊಂದು ಪ್ರಸಂಗ ಆರಂಭಿಸುವ ಮೊದಲು ಕಥಾಸಾರ, ಪಾತ್ರಗಳ ವಿವರ, ಪ್ರಕರಣಗಳ ವಿಭಾಗಗಳನ್ನು ನೀಡಿದ್ದಾರೆ. ಸಾಕಷ್ಟು ಪುಟಗಳಲ್ಲಿ ಪೂರಕ ವಿವರಣೆಗಳಿರುವ ಅಡಿಟಿಪ್ಪಣಿಗಳಿವೆ. ಅವುಗಳನ್ನು ಪಾಠಾಂತರಗಳನ್ನೂ ಗುರುತಿಸದ್ದಾರೆ. ಗ್ರಂಥದ ಕೊನೆಯ ಭಾಗದಲ್ಲಿ ಕ್ಲಿಷ್ಟ ಶಬ್ದಾರ್ಥ ಎಂಬ ಭಾಗವನ್ನೂ ಕೊಟ್ಟಿದ್ದಾರೆ.

ಪಾರ್ತಿಸುಬ್ಬ ವಿರಚಿತ ಪುತ್ರಕಾಮೇಷ್ಠಿ, ಸೀತಾಕಲ್ಯಾಣ, ಪಟ್ಟಾಭಿಷೇಕ, ಪಂಚವಟಿ, ವಾಲಿಸಂಹಾರ, ಉಂಗುರಸಂಧಿ, ಸೇತುಬಂಧನ, ಅಂಗದ ಸಂಧಾನ, ಕುಂಭಕರ್ಣಾದಿ ಕಾಳಗ, ಕುಶಲವರ ಕಾಳಗ, ಕೃಷ್ಣಚರಿತೆ, ಐರಾವತ ಎಂಬ ಹತ್ತು ಪ್ರಸಂಗಗಳು ಹಾಗೂ ಸಭಾಲಕ್ಷಣ ಈ 'ಪಾರ್ತಿಸುಬ್ಬನ ಯಕ್ಷಗಾನಗಳು' ಗ್ರಂಥದಲ್ಲಿ ಪ್ರಕಟವಾಗಿವೆ.

ಡಾ. ಕೆ.ಎಂ.ರಾಘವ ನಂಬಿಯಾರ್ ಅವರು ಸಮಗ್ರ ಕನ್ನಡ ಜಾನಪದ ಮತ್ತು ಯಕ್ಷಗಾನ ಸಾಹಿತ್ಯ ಮಾಲೆ–೧೨ರ ರಂಗಭೂಮಿ ಸಾಹಿತ್ಯ ಪ್ರಕಾರ–೧ರಲ್ಲಿ ಯಕ್ಷಗಾನ ರಾಮಾಯಣ ಪ್ರಸಂಗಗಳನ್ನು ಸಂಪಾದಿಸಿದ್ದಾರೆ. ಇದು ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ ಪ್ರಕಟಗೊಂಡಿದೆ. ಇದರಲ್ಲಿ ಶ್ರೀ ನಂಬಿಯಾರರು ಪಾರ್ತಿಸುಬ್ಬನ ಪುತ್ರಕಾಮೇಷ್ಟಿ, ಸೀತಾಕಲ್ಯಾಣ, ಪಟ್ಟಾಭಿಷೇಕ, ಪಂಚವಟಿ, ವಾಲಿಸಂಹಾರ, ಉಂಗುರಸಂಧಿ, ಸೇತುಬಂಧನ, ಅಂಗದ ಸಂಧಾನ ಪ್ರಸಂಗಗಳನ್ನೂ ಸೇರಿಸಿಕೊಂಡಿದ್ದಾರೆ.

ಪ್ರಸ್ತಾವನೆಯಲ್ಲಿ ನಂಬಿಯಾರರು ಮತ್ತೆ ಪಾರ್ತಿಸುಬ್ಬನ ಪಟ್ಟಾಭಿಷೇಕದ ವೃತ್ತಪದ್ಯ "ಧಾತ್ರಿಗುತ್ತಮ... ಸಂತೋಷಮಮ ಮಾಳ್ಪುದು"ವನ್ನು ಉದಾಹರಿಸಿ "ಈ ಕವಿಯು ಕಣ್ವನಾಮಪುರ (ಕಣಿಪುರ)ದವನೆಂದು ಅಲ್ಲಿನ ಪ್ರಸಿದ್ಧ ಶ್ರೀಕೃಷ್ಣ ದೇವರ ಭಕ್ತನೆಂದು ಮತ್ತು ಪಾರ್ವತಿ (ಪಾರ್ತಿ)ಯ ಮಗನೆಂದೂ ತಿಳಿಯುತ್ತದೆ. ಪಾರ್ತಿಸುಬ್ಬನ ಬಗೆಗಿರುವ ಜನಶ್ರುತಿಯು ಅವನ ಸ್ಥಳ ಕುಂಬಳೆಯೆಂಬುದನ್ನು ಬೆಂಬಲಿಸುತ್ತದೆ" ಎಂದಿದ್ದಾರೆ.

ಈ ಕವಿಯು ಕಥಕಳಿ (ರಾಮನಾಟ್ಟ)ದ ಕೃತಿಗಳನ್ನಲ್ಲದೆ, ತೊರವೆ ರಾಮಾಯಣ, ಚಾಟುವಿಠಲನ ಕನ್ನಡ ಭಾಗವತ, ಲಕ್ಷ್ಮೀಶನ ಜೈಮಿನಿ ಭಾರತ, ಗದುಗಿನ ಭಾರತ, ಇತ್ಯಾದಿಗಳನ್ನು ಚೆನ್ನಾಗಿ ಪಠಿಸಿದವನೆಂಬುದು ಇವನ ರಾಮಾಯಣ ಪ್ರಸಂಗಗಳು, ಶ್ರೀಕೃಷ್ನ ಚರಿತೆ, ಕುಶಲವರ ಕಾಳಗ ಮತ್ತು ಐರಾವತ ಪ್ರಸಂಗಗಳಲ್ಲಿರುವ ಛಾಯೆಗಳಿಂದ ತಿಳಿಯುತ್ತದೆ. ಜತೆಗೆ ಸ್ವತಂತ್ರ ಪ್ರತಿಭೆಯೂ ಇವನಲ್ಲಿ ಧಾರಾಳ ಕಾಣಬಹುದು. ಇವನು ಭಾಸನ ಸಂಸ್ಕೃತ ನಾಟಕಗಳಿಂದಲೂ ಪ್ರಭಾವಿತನಿರಬೇಕೆಂದು ತುಲನೆಯಿಂದ ತಿಳಿದುಬಂದಿದೆ.

ಪಾರ್ತಿಸುಬ್ಬನ ಕಾಲನಿರ್ಣಯದಲ್ಲಿ ಶ್ರೀಯುತರು ಕುಕ್ಕಿಲದವರ ಸಪ್ರಮಾಣ ಮಂಡನೆಯನ್ನು ಅಂಗೀಕರಿಸಿದ್ದಾರೆ. ಅವನ ಕೃತಿಯನ್ನು ಅವಲೋಕಿಸುತ್ತಾ ಈ ಅಭಿಪ್ರಾಯವನ್ನು ಶ್ರೀ ನಂಬಿಯಾರ್ ತಿಳಿಸುತ್ತಾರೆ– "ಯಕ್ಷಗಾನ ಪ್ರಸಂಗವೊಂದರ ರಚನೆಯ ಹಿಂದೆ ಮುಖ್ಯವಾಗಿ ಮೂರು ನೋಟುಗಳು ಇರುತ್ತವೆ. ಒಂದು ಪದ ಕ್ಕೇಳ್ಮೆಗೆ ಹಿತಕರವಾದ ಶಬ್ದಜೋಡಣೆ ಹೊಂದಿ ರಸಭಾವಗಳನ್ನೂ ವ್ಯಂಜಿಸುವ

ಸಾಮರ್ಥ್ಯ ಪಡೆಯುವುದು, ಎರಡು ಅದು ರಾಗತಾಳಗಳಿಗೆ ಆವದ್ಧವಾಗಿದ್ದು ವೇಷಗಳನ್ನು ಲಯಗತಿಗಳೊಂದಿಗೆ ಕುಣಿಸಲು ಸಮರ್ಥವಾಗುವುದು, ಮೂರು ಪಾತ್ರಧಾರಿಗಳು ಆಶು ಸಂಭಾಷಣೆಯನ್ನು ಹೊಸೆಯುವಲ್ಲಿ ಪ್ರೇರಣೆ ನೀಡುವಂಥ ಸಾಮಗ್ರಿಯನ್ನು ಸಾಕಷ್ಟು ಪ್ರಮಾಣದಲ್ಲಿ ಪದದ ಕಿರಿದು ಚೌಕಟ್ಟಿನೊಳಗೆ ತುಂಬಿಸುವುದು. ಈ ಮೂರನ್ನು ಒಂದಕ್ಕಿಂತ ಒಂದು ಹೆಚ್ಚೆನ್ನುವಂತೆ ತುಂಬಿಕೊಂಡು ಪರಿಪೂರ್ಣತೆಯ ಮಟ್ಟಕ್ಕೆ ಏರಿದವುಗಳು ಪಾರ್ತಿಸುಬ್ಬನ ರಾಮಾಯಣ ಕೃತಿಗಳು. ಅವನ ಪದಗಳು ತಿಳಿನೀರಿನ ತಳದಂತೆ, ಅರ್ಥ ಆಳವಾದರೂ ನಮಗೆ ಎಟುಕುವಷ್ಟು ಹತ್ತಿರವಾಗಿ ಕಾಣಿಸಿಕೊಳ್ಳುತ್ತವೆ" (ಪ್ರಸ್ತಾವನೆ) ಉದಾಹರಣಾರ್ಥವಾಗಿ ಪಾರ್ತಿಸುಬ್ಬನ ಪ್ರಯೋಗ ವೈಶಿಷ್ಟ್ಯಗಳನ್ನು ನೀಡಿರುತ್ತಾರೆ. "ಜನಸಾಮಾನ್ಯರ ನಿತ್ಯಜೀವನದಲ್ಲಿ ಬರುವ ನುಡಿಗಟ್ಟುಗಳು, ಗಾದೆಮಾತುಗಳನ್ನು ಹೆಚ್ಚಾಗಿ ತುಂಬಿಕೊಂಡು ಸುಬ್ಬನು ತನ್ನ ನಿರೂಪಣೆಯನ್ನು ಪುಷ್ಟಿಗೊಳಿಸುತ್ತಾನೆ. ನಗೆಗೇಡು ಮಾಡಿದಿರಲ್ಲ, ಹೊತ್ತದ್ದು ಮಿಸೆಯೇ? ಹೊತ್ತದ್ದು ಮೊಲೆಯೇ? ಉಟ್ಟದ್ದು ಸೀರೆಯೇ?, ಏನು ಹೊಡೆಯಿತು ಮಾರಿ, ಪೋಗುವ ದಮ್ಮಯ್ಯ, ಅಡಿಗೆ ಊಟಗಳೆಂಬ ಗೊಡವೆ ನಮಗಿಲ್ಲ, ಕೆಟ್ಟಮೇಲೆ ಬುದ್ಧಿ, ಗಂಟುಕಟ್ಟಿಕೊ ಸೆರಗಿನಲಿ, ಹೆಣ್ಣು ಜನ್ಮವೇ ಸಾಕು, ರಕ್ತಮದದಿಂದ ಕೊಡದಿಪ್ಪೆಯಾ, ಗಂಡಸುತನ ನೋಡಿದೆ ಇವೆಲ್ಲ ಜನಸಾಮಾನ್ಯರ ನಿತ್ಯ ಬಳಕೆಯಲ್ಲಿ ಕಿವಿಗೆ ಬೀಳುವ ನುಡಿಗಟ್ಟುಗಳಲ್ಲವೇ? ಇಂಥವು ಸುಬ್ಬನ ಪದದ ಚೌಕಟ್ಟಿನೊಳಗೆ ಕುಳಿತಾಗ ವಿಶೇಷ ಅರ್ಥ ಪ್ರಕಾಶವನ್ನು ಪಡೆಯುತ್ತವೆ."

ಸುಬ್ಬನ ಪ್ರಸಂಗಗಳ ಮೌಲ್ಯವಿವೇಚನೆಯನ್ನು ಮಾಡುತ್ತಾ "ಯಕ್ಷಗಾನ ಪ್ರಸಂಗಗಳ ರಸ ನಿರೂಪಣೆಯಲ್ಲಿ ಏಕತಾನತೆ ಇರದು. ವೀರ, ಅದ್ಭುತ, ಕರುಣ, ಶಾಂತ, ಇತ್ಯಾದಿಗಳಲ್ಲಿ ಒಂದು ಸಮತೋಲನದ ದಾರಿ ಪ್ರಸಂಗ ರಚನೆಯಲ್ಲಿ ಅಥವಾ ಕಥೆ ಸನ್ನಿವೇಶಗಳ ಸಂಯೋಜನೆಯಲ್ಲಿ ಕಾಣಿಸುತ್ತದೆ... ಧರ್ಮನೀತಿಗಳನ್ನು ಬಿಡದೆ ಮಾಡುವ ಪುರುಷ ಪ್ರಯತ್ನಕ್ಕೆ ದೈವಸಹಾಯ ಇರುತ್ತದೆಂದು ಬಿಂಬಿಸುವುದು ಹೆಚ್ಚಿನ ಪ್ರಸಂಗಗಳ ಉದ್ದೇಶ. ವೀರಭಕ್ತಿಗಳಿಗೆ ಮನ್ನಣೆ; ಯುಗದ ರಚನೆಗಳು ಇವಾಗಿವೆ. ಮಡಿದೇ ಮೋಕ್ಷ ಎಂಬ ಕಲ್ಪನೆಯನ್ನು ಹೆಚ್ಚಾಗಿ ಈ ರಚನೆಗಳೂ ಬೆಟ್ಟುಮಾಡುತ್ತವೆ. ಇವೆಲ್ಲ ಈ ಯುಗದ ನಂಬಿಕೆಯ ಮಾತು. ಈ ನೆಲೆಗಟ್ಟಿನ ಮೇಲೆಯೇ ಅನಂತರದ ಕವಿಗಳೂ ಪ್ರಸಂಗಗಳನ್ನು ರಚಿಸಿರುವುದು. ಭಾರತೀಯ ಪುರಾಣಗಳ ಕಥಾವಾಹಿನಿಯಲ್ಲಿ ಒಳಗೊಂಡಿರುವ ಆಶಯವನ್ನೇ ಯಕ್ಷಗಾನದ ಕವಿಗಳೂ ಸ್ವೀಕರಿಸಿರುವುದು ಆದರೂ ಸಾರ್ವಕಾಲಿಕ ನೆಲೆ ಬೆಲೆಯ ಆಶಯರೂಪಣೆಯ ಸಾಧ್ಯತೆ ಈ ಪ್ರಸಂಗರಚನೆಗಳಲ್ಲಿ ಧಾರಾಳವಾಗಿ ಇದೆ ಎನ್ನುತ್ತಾರೆ.

ಡಿ.ವಿ.ಹೊಳ್ಳ ಎಂಬುವರು (ದೇಲಂಪಾಡಿ, ಕಾಸರಗೋಡು) ಪಾರ್ತಿಸುಬ್ಬನ ಕುರಿತು ಬರೆದಿದ್ದರಂತೆ (ನಾನಂತೂ ಅದನ್ನು ಇನ್ನೂ ನೋಡಿಲ್ಲ).

"ಪಾರ್ತಿಸುಬ್ಬನ ಸಮಸ್ಯೆ"– ೧೯೯೮ರಲ್ಲಿ ಪುತ್ತೂರಿನ ಕರ್ನಾಟಕ ಸಂಘದವರು ದಿ. ಕುಕ್ಕಿಲ ಕೃಷ್ಣಭಟ್ಟರ ಸಂಶೋಧನಾತ್ಮಕ ಲೇಖನಗಳ ಸಂಕಲನವೊಂದನ್ನು ಡಾ. ಎಂ.ಪ್ರಭಾಕರ ಜೋಶಿಯವರ ಸಂಪಾದಕತ್ವದಲ್ಲಿ ಪ್ರಕಟಿಸಿದ್ದಾರೆ. ಈ ಗ್ರಂಥದಲ್ಲಿ ಪ್ರಸ್ತುತ ಶೀರ್ಷಿಕೆಯಡಿಯಲ್ಲಿ ಪಾರ್ತಿಸುಬ್ಬನೆಂದರೆ ಎಲ್ಲಿಯವನು, ಅವನ ಕಥಕಳಿಯಿಂದ ಪ್ರಭಾವಿತನಾಗಿ ಯಕ್ಷಗಾನ ಪ್ರಸಂಗಗಳ್ನು ರಚಿಸಿದನೆಂಬುದರಿಂದ ಸರಿಯಾಗಿ ಅವನು ಬದುಕಿದ್ದ ಕಾಲ ಯಾವುದು ಎಂಬಿತ್ಯಾದಿ ವಿಚಾರಗಳ ಬಗ್ಗೆ ನಡೆದ ಚರ್ಚೆಗಳ ಒಂದು ದಾಖಲಾತಿ ಈ ಗ್ರಂಥದಲ್ಲಿ ಇದೆ.

ಮೊದಲಿಗೆ ಡಾ. ಜೋಶಿಯವರು ನೀಡಿದ ಟಿಪ್ಪಣಿಯ ಒಂದೆರಡು ಭಾಗವನ್ನು ನೋಡೋಣ – ಯಕ್ಷಗಾನ ಕವಿಗಳಾದ ಸುಬ್ಬರೆಷ್ಟು ಮಂದಿ? ಅವರ ಕೃತಿಗಳಾವುವು? ಕಾರಂತರು (ಡಾ. ಶಿವರಾಮ ಕಾರಂತರು) ಉಲ್ಲೇಖಿಸಿದ ಅಜಪುರದ ಸುಬ್ಬನ ಊರು ಯಾವುದು? ಬ್ರಹ್ಮಾರವೋ, ಆಡುವಳ್ಳಿಯೋ? ಕಣ್ವಪುರ ಯಾವುದು? ಮಧೂರು (ಮಧುಪುರ) ಯಾವುದು? ಪಾರ್ತಿಸುಬ್ಬನ ಕಾಲ ವಂಶ ಜಾತಿ ಯಾವುವು? ಪಾರ್ತಿಸುಬ್ಬನದೆನ್ನುವ ಕೃತಿಗಳು ಯಾವುವು? ಯಾವುವು ಅವನಲ್ಲ? ಎಂಬ ಪ್ರಶ್ನೆಗಳು ಪರಿಶೀಲನೆಗೆ ಒಳಗಾದವು. ಜತೆಗೆ ಪಾರ್ತಿಸುಬ್ಬ, ಅಜಪುರದ ಸುಬ್ಬ (ವೆಂಕಾರ್ಯನ ಮಗ ಸುಬ್ಬ), ನಗಿರೆ ಸುಬ್ಬ (ದೈವಜ್ಞ ವಿಠಲಗೌರಿಯವರ ಮಗ) – ಈ ಮೂವರ ಸ್ಥಳ ಕೃತಿಗಳ ಬಗೆಗೂ ಗೊಂದಲವುಂಟಾಗುವ ಹಲವಾರು ದಾಖಲೆಗಳು, ಹೇಳಿಕೆಗಳು, ಪುರಾವೆಗಳು ಮಂಡಿಲ್ಪಟ್ಟವು. ಪಾರ್ತಿಸುಬ್ಬ ಆ ಕವಿ, ಆತನು ಕುಂಬಳೆಯವನು, ಕಣ್ವಪುರ ಕುಂಬಳೆಯೇ ಎಂದು ಒಂದು ಪಕ್ಷ. ಪಾರ್ತಿಸುಬ್ಬನೆಂಬ ವ್ಯಕ್ತಿ ಪ್ರಸಂಗ ಕರ್ತೃವಲ್ಲ, ರಾಮಾಯಣ ಪ್ರಸಂಗಗಳು, ಕೃಷ್ಣಲೀಲೆ, ಮೊದಲಾದ ಪ್ರಸಂಗಗಳ ಕರ್ತೃ ಬೇರೊಬ್ಬ (ಒಂದೋ ಅಜಪುರದ ಸುಬ್ಬ ಅಥವಾ ಅಜ್ಞಾನ ಕವಿ) ಎಂಬುದು ಒಂದು ಪಕ್ಷ. ಮೊದಲನೆಯ ಪಕ್ಷದಲ್ಲಿ ದಿ. ಕುಕ್ಕಿಲರು ಪ್ರಮುಖರು. ಎರಡನೆಯದರಲ್ಲಿ ದಿ. ಡಾ. ಕಾರಂತರು ಮುಖ್ಯರು."

ಈ ಚರ್ಚೆಗೆ ಕಾರಣವಾದುದು ಮುಳಿಯ ತಿಮ್ಮಪ್ಪಯ್ಯನವರು ಹಾಗೂ ಕರ್ನಾಟಕ ಕವಿಚರಿತೆಕಾರರು ಪಾರ್ತಿಸುಬ್ಬನ ಕಾಲಾವಧಿ ಬಗ್ಗೆ (೧೭೪೦–೧೮೫೦) ನೀಡಿದ ದಾಖಲೆಗಿಂತ ಪೂರ್ವದ ಕೃತಿಗಳು ತನಗೆ ದೊರಕಿವೆ ಎಂದು ಕಾರಂತರು ವಾದಕ್ಕೆ ತೊಡಗಿದರು. ಹೊಸ ಚರ್ಚೆ ಆರಂಭವಾಯಿತು.

ಜೋಶಿಯವರು ಇದರಲ್ಲಿ ಭಾಗವಹಿಸಿದವರ ಹೆಸರುಗಳನ್ನು ಸಂಗ್ರಹಿಸಿ ನೀಡಿದ್ದಾರೆ – "ಈ ಚರ್ಚೆಯಲ್ಲಿ ದಿ. ಮಂಜೇಶ್ವರ ಗೋವಿಂದ ಪೈ, ದಿ. ಕೆ.ಪಿ.ವೆಂಕಪ್ಪಶೆಟ್ಟಿ, ಕಯ್ಯಾರ ಕಿಞ್ಞಣ್ಣ ರೈ, ದಿ. ಬೈಕಾಡಿ ವೆಂಕಟಕೃಷ್ಣರಾವ್, ನೀರ್ಪಾಜೆ ಭೀಮ ಭಟ್, ಅಮೃತ ಸೋಮೇಶ್ವರ, ರಾಮಚಂದ್ರ ಉಚ್ಚಿಲ, ಸಿರಿಬಾಗಿಲು ವೆಂಕಪ್ಪಯ್ಯ ಮೊದಲಾದವರು ಭಾಗವಹಿಸಿದ್ದಾರೆ. ಈ ಚರ್ಚೆಯ ವಿವಿಧ ಮುಖಗಳನ್ನೂ ಬೇರೆ ಬೇರೆ ಹಂತಗಳನ್ನೂ ಡಾ. ಶಿವರಾಮ ಕಾರಂತರ ಯಕ್ಷಗಾನ ಬಯಲಾಟ (೧೯೫೭ ಮತ್ತು ೧೯೬೨)ದಲ್ಲಿ ನಮ್ಮ ಅಜಪುರ ಮಧುಪುರ, ಮಧುರಸ್ಮೃತಿ, ಮೊದಲಾದ ಸಂಕಲನಗಳಲ್ಲಿ ಮತ್ತು ಚರ್ಚೆ ನಡೆದ ಕಾಲದ ನವಭಾರತ, ನವಯುಗ, ರಾಷ್ಟ್ರಮತ, ಮುಂತಾದ ಪತ್ರಿಕೆಗಳ ಸಂಚಿಕೆಗಳಲ್ಲಿ ಹಾಗೂ ದಿ. ಕುಕ್ಕಿಲ ಕೃಷ್ಣಭಟ್ಟರು ಸಂಪಾದಿಸಿದ 'ಪಾರ್ತಿಸುಬ್ಬನ ಯಕ್ಷಗಾನಗಳು' (ಮೈಸೂರು ವಿ.ವಿ. ಪ್ರಕಟಣೆ ೧೯೭೫) ಗ್ರಂಥದಲ್ಲೂ ಕಾಣಬಹುದು."

ಒಟ್ಟಿನಲ್ಲಿ ಪಾರ್ತಿಸುಬ್ಬನ ಕಾಲ–ದೇಶಗಳ ಬಗ್ಗೆ ಎರಡು ಶತಮಾನಗಳನ್ನು ಆಚೀಚೆ ಎಳೆದಾಡಿದರೂ ಯಕ್ಷಗಾನಕ್ಕೆ ಅವನ ಕೊಡುಗೆ ಅವಿಸ್ಮರಣೀಯ. ಅವನ ಕೃತಿಗಳು ಇಂದೂ ಆಟ ಕೂಟಗಳಲ್ಲಿ ಮೆರೆಯುತ್ತಲೇ ಇವೆ. ಸರಳ ಸುಂದರ ದೇಸೀ ಪ್ರಯೋಗಗಳ ಮೂಲಕ ಅವನು ಕನ್ನಡಿಗರ (ಯಕ್ಷಗಾನ ಪ್ರೇಮಿಗಳ) ಮನಗಳಲ್ಲು ಮನೆಗಳಲ್ಲೂ ಜೀವಂತವಾಗಿದ್ದಾರೆ. ಅವನ 'ಸಭಾಲಕ್ಷಣ' ಕೃತಿ ಯಕ್ಷಗಾನಕ್ಕೊಂದು ಶಾಸ್ತ್ರೀಯತೆಯ ನೆಲೆಗಟ್ಟನ್ನು ಒದಗಿಸಲು ನೆರವಾಗಿದೆ. ಕನ್ನಡ ನಾಡಿನ ಕರೆನಾಡು, ಮಲೆನಾಡುಗಳಲ್ಲಿ ಕನ್ನಡ ಭಾಷೆ ಮತ್ತು ರಾಮಾಯಣ, ಭಾರತ, ಭಾಗವತಗಳ ಅರಿವಿನ ಹಸಿವನ್ನು ಹೆಚ್ಚಿಸುವಲ್ಲಿ ಅವನ ಕೊಡುಗೆ ಅಪಾರ.

* * *

# ಆಳಕ್ಕಿಳಿದಷ್ಟೂ ಅಧಿಕವಾಗುವ ರತ್ನಗಳ ಸಂಗ್ರಹ

## (ಅಧ್ಯಕ್ಷರ ಭಾಷಣ)

**– ಚಂದ್ರಶೇಖರ ದಾಮ್ಲೆ**

ಯಕ್ಷಗಾನ ಕಲಾ ಪ್ರದರ್ಶನಗಳಿಗೆ ತನ್ನ ಪ್ರಸಂಗಗಳ ಮೂಲಕ ಭರ್ಜರಿ ಪಂಚಾಂಗ ನಿರ್ಮಿಸಿದ ಪಾರ್ತಿಸುಬ್ಬನ ಕೊಡುಗೆಗಳ ಬಗ್ಗೆ ಆಳಕ್ಕಿಳಿದಷ್ಟೂ ಹೊಸ ರತ್ನಗಳು ಸಿಗುತ್ತವೆ. ಈ ದೃಷ್ಠಿಯಿಂದ ಈ ಗೋಷ್ಠಿಯ ಅಧ್ಯಕ್ಷ ಸ್ಥಾನದಿಂದ ನನ್ನ ವಿಚಾರಗಳನ್ನು ಮಂಡಿಸಲು ಇಷ್ಟಪಡುತ್ತೇನೆ.

ಮೊದಲಿಗೆ ಪ್ರಬಂಧ ಮಂಡಿಸಿದ ಡಾ. ಆನಂದರಾಮ ಉಪಾಧ್ಯರು ಪಾರ್ತಿಸುಬ್ಬ ರಚಿಸಿದ ರಾಮಾಯಣ ಪ್ರಸಂಗಗಳ ಆಳವಿಸ್ತಾರಗಳನ್ನು ಹಾಗೂ ಅವುಗಳಲ್ಲಿರುವ ಸಾಹಿತ್ಯಿಕ ಮೌಲ್ಯಗಳನ್ನು ಬಹಳ ಚೆನ್ನಾಗಿ ಪ್ರಸ್ತುತಪಡಿಸಿದ್ದಾರೆ. ಅವರು ಯಕ್ಷಗಾನ ಪ್ರಸಂಗಗಳ ಸಂಗ್ರಹ, ಅವುಗಳ ಸಂಪಾದನೆ ಹಾಗೂ ಪ್ರಕಟಣೆಯಲ್ಲಿ ಸಾಕಷ್ಟು ಪರಿಶ್ರಮ ಪಟ್ಟವರು. ರಾಮಾಯಣ ಪ್ರಸಂಗಗಳನ್ನು ಎಂ.ಫಿಲ್. ಪ್ರಬಂಧಕ್ಕಾಗಿ ಹಾಗೂ ಮಹಾಭಾರತ ಪ್ರಸಂಗಗಳನ್ನು ಪಿಎಚ್.ಡಿ. ಮಹಾಪ್ರಬಂಧಕ್ಕಾಗಿ ಡಾ. ಆನಂದರಾಮ ಉಪಾಧ್ಯರು ಅಧ್ಯಯನ ಮಾಡಿದ್ದಾರೆ. ಹಾಗಾಗಿ ಇಂದಿನ ಅವರ ಪ್ರಬುದ್ಧ ಪ್ರಬಂಧದ ಮೇಲೆ ವಿಶ್ಲೇಷಣೆ ಮಾಡುವ ಸಾಹಸ ಮಾಡದೆ ಕೆಲವು ಪೂರಕ ಅಂಶಗಳನ್ನಷ್ಟೇ ಉಲ್ಲೇಖಿಸಬಯಸುತ್ತೇನೆ.

ರಾಮಾಯಣ ಎಂಬ ಮಹಾಕಾವ್ಯವು ಪ್ರದೇಶ, ಭಾಷೆ, ಕವಿಕಲ್ಪನೆ ಮತ್ತು ಕಾಲಾನುಸಾರವಾಗಿ ಬದಲಾದ ಸಾಂಸ್ಕೃತಿಕ ಪ್ರಜ್ಞೆಯೊಂದಿಗೆ ವೈವಿಧ್ಯಮಯವಾಗಿ ರಚನೆಗೊಂಡಿದೆ. “ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ” ಎಂದು ಕುಮಾರವ್ಯಾಸನೇ ಹೇಳಿದ್ದಾನೆ. ಮೂಲ ಕಥೆ ಒಂದೇ ಇದ್ದರೂ ಅಲ್ಲಲ್ಲಿ ಹಲಕೆಲವು ಮಾರ್ಪಾಡುಗಳಾಗಿರುವುದು ಕಂಡುಬರುತ್ತವೆ. ಆ ದೃಷ್ಟಿಯಿಂದ ಪಾರ್ತಿಸುಬ್ಬನ ಯಕ್ಷಗಾನದ ರಾಮಾಯಣ ಪ್ರಸಂಗಗಳನ್ನು ಒಂದು ಸಂಕಲನವಾಗಿಸಿ ನೋಡಿದರೆ ಅದರದ್ದೇ ಅನನ್ಯತೆ ಇರುವುದು ಕಂಡುಬರುತ್ತದೆ. ಹಾಗಾಗಿ ಪಾರ್ತಿಸುಬ್ಬ ಈ ಕಲಾ

ಮಾಧ್ಯಮದ ಮೂಲಕ ತನ್ನದೇ ಆದ ರಾಮಾಯಣವನ್ನು ಜನಮಾನಸದಲ್ಲಿ ಬಿತ್ತಿರುವುದು ಸ್ಪಷ್ಟವಾಗಿದೆ. ಪರಿಣಾಮವಾಗಿ ನಮ್ಮ ಗ್ರಾಮೀಣ ಜನರು ತಮಗೆ ಗೊತ್ತಿರುವುದೇ ಮೂಲ ರಾಮಾಯಣ ಎಂಬ ವಿಶ್ವಾಸ ತಾಳಿರುವುದರಲ್ಲಿ ಅಚ್ಚರಿ ಇಲ್ಲ. ಉದಾಹರಣೆಗೆ ಶೂರ್ಪನಖಿ ರಾಕ್ಷಸ ವೇಷದಲ್ಲಿ ಬಂದು ತಾನು ರಾವಣನ ತಂಗಿ ಎಂದು ರಾಮನಲ್ಲಿ ಪರಿಚಯಿಸಿಕೊಂಡು ಮದುವೆಯಾಗುವಂತೆ ಒತ್ತಾಯಿಸಿದಳು ಎಂಬ ಪಾಠಾಂತರವನ್ನು ನಮ್ಮ ಯಕ್ಷಗಾನದ ಪ್ರೇಕ್ಷಕರು ಒಪ್ಪಲಾರರು. ಅವರಿಗೆ ಘೋರ ಶೂರ್ಪನಖಿಯು ಮಾಯಾಶೂರ್ಪನಖಿಯಾಗಿ ಕಾಣಿಸಿಕೊಳ್ಳಲೇಬೇಕು; ಆಕೆಯ ನಾಸಾಚ್ಛೇದನವಾಗುವಾಗ ಘೋರ ಶೂರ್ಪನಖಿ ಮತ್ತೆ ಕಾಣಿಸಿಕೊಂಡು ಪ್ರತಿಜ್ಞೆಗಳನ್ನು ಮಾಡಲೇಬೇಕು. ಅದಲ್ಲವಾದರೆ ಅದು ರಾಮಾಯಣವೇ ಅಲ್ಲ. ಅಷ್ಟರ ಮಟ್ಟಿಗೆ ಪಾರ್ತಿಸುಬ್ಬನ ರಾಮಾಯಣ ನಮ್ಮ ಜನಮಾನಸದ ಮೇಲೆ ಪ್ರಭಾವ ಬೀರಿದೆ.

ಪಾರ್ತಿಸುಬ್ಬನ ರಾಮಾಯಣ ಪ್ರಸಂಗ ಮಾಲಿಕೆಯಲ್ಲಿ ಮೊದಲನೇಯದಾದ 'ಪುತ್ರಕಾಮೇಷ್ಠಿ–ಸೀತಾಕಲ್ಯಾಣ' ಪ್ರಸಂಗವು ಬಹಳ ವಿಸ್ತಾರವಾದ ಚೌಕಟ್ಟನ್ನು ಹೊಂದಿದೆ. ಕೆಲವೊಮ್ಮೆ ಸನ್ನಿವೇಶಗಳನ್ನು ವಚನಗಳಲ್ಲಿ ಅಥವಾ ವಾಕ್ಯಗಳಲ್ಲಿ ಹೇಳಲಾಗಿದೆ. ನಾಟಕಗಳಲ್ಲಿಯೂ ಈ ಬಗೆಯ ತಂತ್ರಗಳಿರುತ್ತವೆ. ಉದಾಹರಣೆಗೆ "ಈ ರೀತಿಯಿಂದ ಜಾನಕಿ ಪೇಳ್ದು ಹಿಂತಿರುಗಿ ಸತಿಯರ ಸೇರಿ ಇರಲಾಗಿ ಆ ವೇಳ್ಯದೊಳ್ ಇತ್ತಲಾಗಿ ಭೂಪಾಲಕರು ಮಾತಾಡುತಿರ್ದರದೆಂತೆನೆ" ಎಂಬ ವಚನವನ್ನು ಸನ್ನಿವೇಶದ ಪರಿಚಯಕ್ಕಾಗಿ ನೀಡಿದ್ದಾನೆ. ಆದರೆ ಮುಂದಿನ ಯಕ್ಷಗಾನ ಕವಿಗಳ ಪ್ರಸಂಗಗಳಲ್ಲಿ ಈ ಸನ್ನಿವೇಶಗಳನ್ನು ಪದ್ಯಗಳ ರೂಪದಲ್ಲೇ ಕೊಡುವ ರೂಢಿ ಬಂದಿದೆ. ವಿಶ್ವಾಮಿತ್ರನು ರಾಮನಿಗೆ ಧನುರ್ಭಂಗಮಾಡಿ ಸೀತೆಯನ್ನು ವರಿಸು ಎಂದು ಹೇಳುವ ಪದ್ಯದ ಬಳಿಕ ಒಂದು ವಚನವಿದೆ. ಆದರೆ ಮುಂದುವರಿದ ಸನ್ನಿವೇಶವನ್ನು ಕವಿಯು ನಾದನಾಮಕ್ರಿಯೆ ರಾಗದ ಅಷ್ಟ ತಾಳದಲ್ಲಿ ರಾಮನ ಪಾತ್ರಧಾರಿಗೆ ನೃತ್ಯಾಭಿನಯಕ್ಕೆ ಅನುಕೂಲವಾಗುವಂತೆ ಈ ಕೆಳಗಿನ ಪದ್ಯ ರಚಿಸಿದ್ದಾನೆ.

**"ದಟ್ಟಿ ಚಲ್ಲಣ ಬಿಗಿದುಟ್ಟನು । ಕಿ । ಗ್ಗಟ್ಟು ಕಠಾರಿಯನಾಂತನು ।**
**ತಟ್ಟನೆ ಬಿಲ್ಲನು ಹಿಡಿದನು । ಅಘ । ರಟ್ಟಿಧನುವ ಮುರಿದಿಟ್ಟನು ॥**

– ಇಲ್ಲಿ ವಿಶ್ವಾಮಿತ್ರನಿಗೆ ಒಂದು ಪದ್ಯ ಬೇಕಿತ್ತು. ಆದರೆ "ಇತ್ತಲಾ ಸೀತಾದೇವಿ ಬರುತಿರ್ದಳದೆಂತೆನೆ" ಎಂಬ ವಚನದ ಮೂಲಕ ಕವಿಯು ನಾಲ್ಕು ಪದ್ಯಗಳಲ್ಲಿ ಸೀತೆಯ ವರ್ಣನೆಗೆ ತೊಡುತ್ತಾನೆ. ಅಂದರೆ ಪಾರ್ತಿಸುಬ್ಬನ ಪ್ರಸಂಗ ರಚನೆಯಲ್ಲಿ ಕೆಲವು ಸಲ ಸನ್ನಿವೇಶಗಳ ಸ್ಪಷ್ಟತೆಗಿಂತ ವ್ಯಕ್ತಿಗಳ ವರ್ಣನೆಯು ಪ್ರಾಧಾನ್ಯ ಪಡೆಯುತ್ತದೆ.

ರಾಮ–ಪರಶುರಾಮ ಭೇಟಿಯ ಸಂದರ್ಭದಲ್ಲಿ ಪರಶುರಾಮನ ಪ್ರವೇಶದ ಸೂಚನೆ ಹೀಗಿದೆ: ಇಲ್ಲಿ ಸ್ವಗತಕ್ಕೆ ಅವಕಾಶವಿಲ್ಲ. "...ಪಥದೊಳು ಅಂತಕಹರನಂದದಿ ಪರಶುರಾಮಂ ತಡೆದು ಗರ್ಜಿಸುತ ಏನೆಂದನು ರಂದರೆ..." ಹೀಗೆ ವಚನದ ಮೂಲಕ ಸನ್ನಿವೇಶವನ್ನು ಹೇಳಿ, ನೇರವಾಗಿ ಎದುರಾಗಿ "ಆರೆಲೊ ನಡೆದು ಬಹ ರಾಮ ಕೇಳೊ ಮೂಢ" ಎಂಬ ಪದ್ಯವಿದೆ. ಮುಂದೆ ಯುದ್ಧಕ್ಕೆ ಹತ್ತು ಪದ್ಯಗಳನ್ನು ಕವಿ ಬರೆದಿದ್ದಾನೆ. ಅಂದರೆ ಯಕ್ಷಗಾನ ರಂಗದಲ್ಲಿ ತರಬೇಕಾದ ನಾಟಕೀಯತೆಯ ಕಲ್ಪನೆ ಆ ಕಾಲದಲ್ಲಿ ಭಿನ್ನವಾಗಿತ್ತೆಂದು ಹೇಳಬಹುದು.

ಪಾರ್ತಿಸುಬ್ಬ ಮುಂದಿನ ಪ್ರಸಂಗಗಳಲ್ಲಿಯೂ ವಿಸ್ತಾರವಾದ ಚೌಕಟ್ಟನ್ನು ಇಟ್ಟುಕೊಂಡದ್ದು ಕಂಡುಬರುತ್ತದೆ. ಪಟ್ಟಾಭಿಷೇಕ–ಪಂಚವಟಿ, ಪಂಚವಟಿ–ವಾಲಿಸಂಹಾರ, ಉಂಗುರುಸಂಧಿ, ಸೇತುಬಂಧನ, ಅಂಗದ ಸಂಧಾನ, ಕುಂಭಕರ್ಣಾದಿ ಕಾಳಗ ಪ್ರಸಂಗದಲ್ಲೇ ಇಂದ್ರಜಿತುವಿನ ಯುದ್ಧವಾದ ನಂತರದ ರಾಮಾಯಣದ ಪ್ರಸಂಗವನ್ನು ಅಂದರೆ ರಾವಣವಧೆಯನ್ನು ಬರೆಯದಿರುವುದು ಒಂದು ಅಚ್ಚರಿಯ ಸಂಗತಿಯಾಗಿದೆ. ಅದಕ್ಕೆ ಕುಕ್ಕಿಲ ಕೃಷ್ಣಭಟ್ಟರು ನೀಡಿದ ಸಮಜಾಯಿಷಿಯನ್ನು ಡಾ. ಉಪಾಧ್ಯರು ಉಲ್ಲೇಖಿಸಿದ್ದಾರೆ. ಆದರೆ ಮುಂದೆ ಸೀತಾಪರಿತ್ಯಾಗ ಸೇರಿದಂತೆ ಕುಶಲವರ ಕಾಳಗ, ಕೃಷ್ಣ ಚರಿತೆ ಮತ್ತು ಐರಾವತ ಪ್ರಸಂಗಗಳನ್ನು ಬರೆದಿರುವ ಪಾರ್ತಿಸುಬ್ಬ ಸಭಾಲಕ್ಷಣವನ್ನು ಕೂಡಾ ಬರೆದಿರುವುದರಿಂದ ಈ ಕಲಾಪ್ರಕಾರಕ್ಕೆ ತಳಹದಿ ರೂಪಿಸಿದ ಕೀರ್ತಿಗೆ ಪಾತ್ರನಾಗಿದ್ದಾನೆ.

ಇಂದಿನ ಗೋಷ್ಠಿಯಲ್ಲಿ ರಾಮಾಯಣದ ಪ್ರಸಂಗಗಳನ್ನು ಮಾತ್ರ ಆಯ್ದುಕೊಂಡಿದ್ದರೂ ಪಾರ್ತಿಸುಬ್ಬ ಬರೆದ ಐರಾವತ ಪ್ರಸಂಗದ ಕುರಿತಾಗಿಯೂ ಪ್ರಬಂಧಕಾರರಾದ ಡಾ. ಆನಂದರಾಮ ಉಪಾಧ್ಯರು ವಿಚಾರ ಮಂಡಿಸಿದ್ದಾರೆ. ಅವರು ತಮ್ಮ ವಿಷಯದ ಚೌಕಟ್ಟಿನೊಳಗೆ ಪಾರ್ತಿಸುಬ್ಬನ ಕವಿಸಮಯದ ಯುಕ್ತಿಗಳನ್ನೂ, ಸಾಹಿತ್ಯದ ಸವಿಯನ್ನೂ ಉಣಬಡಿಸಿದ್ದಾರೆ. ಇಲ್ಲಿ ಗಮನೀಯ ಅಂಶವೇನೆಂದರೆ ಪಾರ್ತಿಸುಬ್ಬನ ಕಾಲದಿಂದ ತೊಡಗಿ ಸುಮಾರು ಮೂರು ಶತಕಗಳಲ್ಲಿ ಇದೇ ಪ್ರಸಂಗಗಳು ರಾಮಾಯಣ ಕಥಾನಕದ ಪ್ರದರ್ಶನಕ್ಕೆ ಚಾಲ್ತಿಯಲ್ಲಿವೆ ಎಂಬುದು. ಲವಕುಶ ಕಾಳಗದ ಪರ್ಯಾಯ ಪ್ರಸಂಗವನ್ನು ಬಡಗುತಿಟ್ಟಿನವರು ಆಡುತ್ತಿದ್ದರೂ ತೆಂಕಿನ ಪ್ರೇಕ್ಷಕರಿಗೆ ಪಾರ್ತಿಸುಬ್ಬನ ಕುಶಲವರ ಕಾಳಗವೇ ಇಷ್ಟ. ಅಂದರೆ ರಾಮಾಯಣಗಳೆಷ್ಟೇ ಹುಟ್ಟಿಕೊಂಡರೂ ಯಕ್ಷಗಾನ ವಲಯದಲ್ಲಿ ಪಾರ್ತಿಸುಬ್ಬನ ಪ್ರಸಂಗಗಳಿಗೆ ಪರ್ಯಾಯ ಪ್ರಸಂಗಗಳು ಬಳಕೆಗೆ ಬಂದಿಲ್ಲವೆಂಬುದು ಉಲ್ಲೇಖನೀಯ. ಇವು ತೆಂಕು, ಬಡಗು ಮಾತ್ರವಲ್ಲದೆ ಮೂಡಲಪಾಯ, ಘಟ್ಟದಕೋರೆಗಳಲ್ಲಿಯೂ ಬಳಕೆಯಲ್ಲಿವೆ ಎಂಬುದರಿಂದ

ಯಕ್ಷಗಾನವು ಮೂಲದಲ್ಲಿ ಒಂದೇ ಆಗಿತ್ತೆಂಬುದಾಗಿಯೂ ಊಹನೆಗಳನ್ನು ಮಾಡಬಹುದಾಗಿದೆ.

ಪ್ರಸ್ತುತ ಗೋಷ್ಠಿಯ ಇನ್ನೊಂದು ಪ್ರಬಂಧ ಮಂಡನೆಗೆ ಆಹ್ವಾನಿತರಾಗಿದ್ದ ಯಕ್ಷಗಾನ ಕವಿ ಪ್ರೊ. ಡಿ.ಎಸ್.ಶ್ರೀಧರ್‌ರವರು ಭಾಷಣದ ಬದಲು ಪ್ರಾತ್ಯಕ್ಷಿಕೆಯನ್ನು ನಡೆಸುವ ಮೂಲಕ ತಮ್ಮ ಮಂಡನೆಯನ್ನು ಕರ್ಣಾನಂದಕರವಾಗಿಸಿದರು. ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ಕೇಳಿಬರುವ ಜನಪ್ರಿಯ ಛಂದಸ್ಸುಗಳ ಹಾಡುಗಳನ್ನು ಬಿಟ್ಟು ಅಪರೂಪದ ಛಂದಸ್ಸುಗಳ ಪದ್ಯಗಳನ್ನಾಯ್ದು ಅವುಗಳನ್ನು ಮೊದಲೇ ಪಟ್ಟಿ ಮಾಡಿ ಭಾಗವತರುಗಳಾದ ಶ್ರೀರಾಮಕೃಷ್ಣ ಮಯ್ಯ ಸಿರಿಬಾಗಿಲು ಹಾಗೂ ಶ್ರೀ ಶಿವಶಂಕರ ಬಲಿಪರಿಗೆ ಕಳಿಸಿಕೊಟ್ಟಿದ್ದರು. ಹಾಗಾಗಿ ವೇದಿಕೆಯಲ್ಲಿ 'ಯಾವುದು?' 'ಹೇಗೆ?' ಇತ್ಯಾದಿ ಗೊಂದಲಗಳಿಲ್ಲದೆ ಈ ಗೋಷ್ಠಿ ಸುಲಲಿತವಾಗಿ ಮೂಡಿಬಂದಿದೆ. ಪ್ರತಿಯೊಂದು ಹಾಡಿನ ಪ್ರಸ್ತುತಿಗೆ ಶ್ರೀಧರ್ ಅವರು ವಿಶ್ಲೇಷಣಾತ್ಮಕ ವಿವರಣೆ ನೀಡಿ ತಾಳ, ಲಯ, ಛಂದಸ್ಸುಗಳ ಸಂಕೀರ್ಣ ಸಂಬಂಧವನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ. ಹಾಗಾಗಿ ಕೇಳುಗರಿಗೆ ಪಾರ್ತಿಸುಬ್ಬನ ಕವಿತ್ವದ ಔನ್ನತ್ಯದ ಪರಿಚಯವಾಯಿತು. ಏಕೆಂದರೆ ಯಕ್ಷಗಾನ ಕಲಾಸಕ್ತರಿಗೆ ಪ್ರಸಂಗ ಪದ್ಯವನ್ನು ಕೇಳುವ ಉತ್ಸಾಹ ಇರುತ್ತದೆಯೇ ಹೊರತು ಪ್ರಸಂಗ ಸಾಹಿತ್ಯವನ್ನು ಓದುವ ಆಸಕ್ತಿ ಇರುವುದಿಲ್ಲ. ಆ ದೃಷ್ಟಿಯಿಂದ ಪ್ರೊ. ಶ್ರೀಧರ್ ಅವರ ಪ್ರಯತ್ನ ಸಾರ್ಥಕವಾಗಿದೆ ಎನ್ನಬಹುದು.

ವಿದ್ವಾಂಸರಾದ ಇಬ್ಬರು ಪ್ರಬಂಧಕಾರರಿಗೂ ತಮ್ಮ ವಿಚಾರ ಮಂಡನೆಗೆ ಸಮಯ ಸಾಕಾಗಲಿಲ್ಲ ಎಂಬುದು ವಾಸ್ತವ. ಆದರೆ ಅದು ಅನಿವಾರ್ಯವಾದ ಅಡಚಣೆಯಾದ್ದರಿಂದ ಒಂದಿಷ್ಟು ನನ್ನ ಸಮಯವನ್ನು ಹಂಚಿಕೊಂಡದ್ದರಿಂದಾಗಿ ನನಗೂ ಕೇಳುಗರಿಗೂ ಲಾಭವೇ ಆಯಿತು. ಇಂತಹ ಒಂದು ಗೋಷ್ಠಿಯ ಅಧ್ಯಕ್ಷತೆ ವಹಿಸುವ ಅವಕಾಶ ನೀಡಿದ್ದಕ್ಕಾಗಿ ನಾನು ಕರ್ನಾಟಕ ಯಕ್ಷಗಾನ ಅಕಾಡೆಮಿಗೂ ಭಾಗವಹಿಸಿದ ಕಲಾಸಕ್ತರಿಗೂ ಆಭಾರಿಯಾಗಿದ್ದೇನೆ.

* * *

# ಗೋಷ್ಠಿ – ೨
# ಪಾರ್ತಿಸುಬ್ಬನ ಪದ ಪ್ರಯೋಗ ವೈಶಿಷ್ಟ್ಯಗಳು

**– ವಾಸುದೇವ ರಂಗಾಭಟ್ಟ, ಮಧೂರು**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಯಕ್ಷಗಾನ ಪ್ರಸಂಗ ಸಾಹಿತ್ಯಕ್ಕೆ ವಿಶಿಷ್ಟವಾದ, ನಿರಾಕರಿಸಲಾಗದ ಮಹತ್ವವಿದೆ. ಬಹುತೇಕ ಎಲ್ಲಾ ಪ್ರಸಂಗಗಳು ರಸನಿಷ್ಠವಾಗಿ ಸರಳ ರಚನೆಗಳ ಮೂಲಕ ಗಾಯನದಿಂದ ಪ್ರಕಾಶಿತವಾಗಿ ಸಹೃದಯರನ್ನು ತಲಪುವ ಸಾಹಿತ್ಯ ಪ್ರಕಾರ. ಹೆಚ್ಚಾಗಿ ನಡುಗನ್ನಡದಲ್ಲಿಯೇ ರಚಿತವಾದ ಈ ಪ್ರಸಂಗಗಳು ಶ್ರವಣ ರಮಣೀಯವಾಗಿ, ಛಂದೋಬದ್ಧವಾಗಿ, ವೈವಿಧ್ಯಪೂರ್ಣ ರಾಗತಾಳಗಳ ವಿನ್ಯಾಸಕ್ಕೊಳಪಟ್ಟು ರಂಗದಲ್ಲಿ ವೇಷಗಳು ವಿವಿಧ ಲಯಗತಿಯಲ್ಲಿ ಕುಣಿಯಲು ಅನುಕೂಲವಾಗುವಂತೆ ವಿರಚಿತವಾಗಿರುತ್ತವೆ. ಬಹುತೇಕ ಪದ್ಯಗರ್ಭಗಳೂ ತನ್ನ ಪರಿಮಿತಿಯೊಳಗೆ ಪಾತ್ರಧಾರಿಗಳಿಗೆ ನವೋನವವೆನಿಸುವ ಆಶುಸಂಭಾಷಣೆಗಳನು ಹೊಸೆಯಲು ಪ್ರೇರಕವಾದ ಸತ್ವವನ್ನೂ ತುಂಬಿಕೊಂಡಿರುತ್ತವೆ. ಈ ಗುಣಲಕ್ಷಣಗಳನ್ನು ಹೊಂದಿದ ಯಕ್ಷಗಾನ ಪ್ರಸಂಗ ಕಾವ್ಯಗಳನ್ನು ರಚಿಸಿದ ಕವಿಗಳ ಸಾಲಿನಲ್ಲಿ ಕುಂಬಳೆ ಪಾರ್ತಿಸುಬ್ಬನ ಹೆಸರು ಅಗ್ರಮಾನ್ಯವಾಗಿ ಗುರುತಿಸಲ್ಪಟ್ಟಿದೆ.

ರಾಮಾಯಣದ ಪ್ರಸಂಗಗಳು, ಕೃಷ್ಣ ಚರಿತೆ ಹಾಗೂ ಐರಾವತ ಪ್ರಸಂಗ ಪಾರ್ತಿಸುಬ್ಬನ ಪ್ರಧಾನ ಕೃತಿಗಳು. ಅಸಂಖ್ಯ ರಂಗಪ್ರಯೋಗಗಳನ್ನು ಕಂಡ ಈ ಪ್ರಸಂಗಗಳ ಯಶಸ್ಸು ಮತ್ತು ಕೀರ್ತಿಗಳೇ ಕವಿಯ ಯೋಗ್ಯತೆಯನ್ನು ನಿರೂಪಿಸುತ್ತದೆ. ಇವುಗಳು ಅನುಪಮ ರಂಗಸಾಧ್ಯತೆಗಳನ್ನು ಸಾಕ್ಷಾತ್ಕರಿಸಿದ, ಅಸಾಮಾನ್ಯ ಪುರಾಣ ವ್ಯಾಖ್ಯಾನಗಳಿಗೆ, ಅರ್ಥಾನ್ವೇಷಣೆಗೆ ಪ್ರಚೋದಕವಾದ ಶ್ರೇಷ್ಠ ರಚನೆಗಳು. ಬಹುಕಾಲದಿಂದ ಬಳಕೆಯಲ್ಲಿದ್ದರೂ ಇಂದಿಗೂ ನವೀನ ಸಾಧ್ಯತೆಗಳನ್ನು ತೆರೆದಿಡುತ್ತಾ ಇರುವ ಈತನ ಶ್ರೇಷ್ಠ ಸಾಹಿತ್ಯ ಕೃತಿಗಳು, ಕನ್ನಡದ ಸಾಹಿತ್ಯ ಸಂದರ್ಭದಲ್ಲಿ ಉಳಿದ ಯಕ್ಷಗಾನ ಕಾವ್ಯಗಳಂತೆ ಅವಗಣಿತವಾಗಿ ಯೋಗ್ಯ ಮನ್ನಣೆಯನ್ನು ಗಳಿಸದಿರುವುದು ಚಿಂತನಾರ್ಹ ವಿಚಾರ. ಕನ್ನಡ ಸಾಹಿತ್ಯ ವಲಯದಲ್ಲಿ ಪಾರ್ತಿಸುಬ್ಬನಂತಹ ಯಕ್ಷಗಾನದ ಮೇರು ಕವಿಪ್ರತಿಭೆಗಳಿಗೆ ಅರ್ಹವಾದ ಅದರ ಮನ್ನಣೆ ಲಭ್ಯವಾಗಲಿಲ್ಲ ಎಂಬ ಕೂಗು ಯಕ್ಷಗಾನ

ಕಲೆಯ ಸತ್ತ್ವವನ್ನೂ ಮಾನಿಸಿದ, ಪ್ರೀತಿಸಿದ ಸಹೃದಯರ ಮೂಲಕ ಹೊರಹೊಮ್ಮುವುದಕ್ಕೆ ತೊಡಗಿ ಕಾಲ ಕೆಲವು ಕಳೆಯಿತು. ಸಾಹಿತ್ಯ ಕ್ಷೇತ್ರ ಪ್ರಸಂಗ ರಚನೆಗಳನ್ನು ಗಂಭೀರವಾಗಿ ಪರಿಗಣಿಸದಿರುವುದರಿಂದ ಯಕ್ಷಗಾನ ಕವಿಗಳು ಸ್ಥಾನಮಾನಗಳಿಂದ ವಿವಂಚಿತರಾದರು ಅಂತ ಮೇಲ್ನೋಟಕ್ಕೆ ಅನಿಸುವುದು ಸಹಜ. ಆದರೆ ಪರಿಗಣನೆ ಲಭ್ಯವಾಗದಿರಲು ಕಾರಣವನ್ನು ಅನ್ವೇಷಿಸಿದರೆ, ಈ ಸಮಸ್ಯೆಯ ಭಿನ್ನ ಆಯಾಮದ ದರ್ಶನವಾಗುತ್ತದೆ.

ಭಾರತೀಯ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಇದಕ್ಕೆ ಕಾರಣವಾಗಿರಬಹುದಾದ ವಿಚಾರಗಳ ಕೆಲವು ಹೊಳಹುಗಳು ಲಭ್ಯವಾದೀತು. ಭಾರತದ ಪ್ರಾಚೀನವಾದ ಸಂಸ್ಕೃತ ಸಾಹಿತ್ಯ ಪರಂಪರೆಯಲ್ಲಿ ಕಾವ್ಯ ಮತ್ತು ನಾಟಕಗಳನ್ನು ಭಿನ್ನ ಭಿನ್ನವಾಗಿ ಪರಿಗಣಿಸುವ, ಉಭಯ ಪ್ರಭೇದಗಳಾಗಿ ಗುರುತಿಸುವ ಪರಿಪಾಠ ಹಿಂದಿನ ಕಾಲದಿಂದಲೇ ಇತ್ತು ಅನಿಸುತ್ತದೆ. “ಭಾರತೀಯ ಕಾವ್ಯ ಮೀಮಾಂಸೆ” ಎಂಬ ಗ್ರಂಥದಲ್ಲಿ ಇದರ ಸೂಚನೆಯನ್ನು ಶ್ರೀಯುತ ತೀ.ನಂ.ಶ್ರೀ.ಯವರು ಉಲ್ಲೇಖಿಸಿದ್ದಾರೆ. ಆ ನೆಲೆಯಲ್ಲೇ ಯಕ್ಷಗಾನದ ಕೃತಿ ಹಾಗೂ ಕವಿಗಳಿಗೊದಗಿದ ಸ್ಥಿತಿಯನ್ನು ವಿವೇಚಿಸಬೇಕಾದುದು ಯುಕ್ತ ಅನಿಸುತ್ತದೆ.

ಸಾಮಾನ್ಯವಾಗಿ ಕೇಳಿ ಓದಿ ಹಾಡತಕ್ಕ ಗದ್ಯ–ಪದ್ಯಾತ್ಮಕ ರಚನೆಗಳನ್ನು ‘ಸಾಹಿತ್ಯ’ ಎಂದು ಗುರುತಿಸಿದರೆ ಅಭಿನಯದ ಮೂಲಕ ರಂಗದಲ್ಲಿ ಆವಿಷ್ಕಾರಗೊಳ್ಳುವ ಸಾಹಿತ್ಯವನ್ನು ರೂಪಕ ಅಥವಾ ನಾಟಕ ಎಂದು ಗುರುತಿಸಲಾಗುತ್ತದೆ. ಯಥಾರ್ಥವಾಗಿ ಇವೆರಡೂ ಪ್ರಕಾರಗಳನ್ನು “ಕಾವ್ಯ” ಶಬ್ದ ಒಳಗೊಳ್ಳಬೇಕು. ಆದರೆ ಇವೆರಡೂ ಬೆಳೆದ ಸಂಪ್ರದಾಯಗಳು ವಿಭಿನ್ನವಾದುದು. ಆದುದರಿಂದಲೇ ಪ್ರಾಚೀನರು ಈ ಎರಡೂ ಕಾವ್ಯ ಶಾಖೆಗಳನ್ನು ಸಮಾನ ಪರಿಗಣನೆಗೆ ಒಳಪಡಿಸಿದ್ದು ಕಂಡುಬರುವುದಿಲ್ಲ. ಕಾವ್ಯಲಕ್ಷಣಗಳ ಕುರಿತು ಅಲಂಕಾರ ಶಾಸ್ತ್ರ ವಿವೇಚಿಸಿದರೆ ರೂಪಕ ಅಥವಾ ಅದರ ಹಲವು ರೂಪಗಳಲ್ಲೊಂದಾದ ನಾಟಕದ ಲಕ್ಷಣಗಳನ್ನು ನಾಟ್ಯಶಾಸ್ತ್ರ ವಿವೇಚಿಸುತ್ತದೆ. ಈ ಪ್ರಭೇದ ಪೂರ್ವದಲ್ಲಿ ಇದ್ದುದಕ್ಕೆ ಕಾರಣವನ್ನು ನಾವು ಊಹಿಸಬಹುದು. ಅನ್ಯ ಕಾವ್ಯಗಳಂತೆ ನಾಟಕಗಳು ಕವಿ ಪ್ರತಿಭೆಯಿಂದ ಕೃತಿ ರಚನೆಯಿಂದ ಸ್ವಯಂಪ್ರಕಾಶಗೊಳ್ಳದು. ನಾಟಕವೊಂದು ಅಭಿವ್ಯಕ್ತವಾಗಲು ಪಂಚಾಂಗಗಳು ಅನಿವಾರ್ಯ. (ಅಭಿನಯತ್ರಯಂ ಗೀತಾದ್ಯೇತಿ ಪಂಚಾಂಗಂ ನಾಟ್ಯಮ್” ಆಂಗಿಕ, ಆಹಾರ್ಯ, ವಾಚಿಕ, ಗೀತ, ವಾದ್ಯ ಎಂಬ ಪಂಚಾಂಗಗಳ ಮೂಲಕ ಪ್ರಕಟವಾಗುವುದೆ ನಾಟ್ಯ). ಈ ಸಂಕೀರ್ಣ, ವಿಭಿನ್ನ ಅಂಗೋಪಾಂಗಗಳ ಮೂಲಕ ಸಿದ್ಧಿಸುವ ಸಮಗ್ರತೆಯೇ ರೂಪಕ (ನಾಟಕ)ಗಳನ್ನು ಉಳಿದ ಕಾವ್ಯ ಶಾಖೆಗಳಿಂದ ಪ್ರತ್ಯೇಕಿಸಿತು. ಆದುದರಿಂದಲೇ ಕಾವ್ಯ ಮೀಮಾಂಸಕರು ನಾಟಕಾದಿಗಳ ಪ್ರಭೇದವನ್ನು “ಆಗಮಾಂತರ” (ಅನ್ಯಶಾಸ್ತ್ರ) ಎಂದು ಪ್ರತ್ಯೇಕಿಸಿದರು.

ಆದರೆ ಕಾಲಕ್ರಮೇಣ ಈ ನಿಲುವು ವಿವೇಚನೆಗೆ ಒಳಗಾಗಾದ ಇವೆರಡು ಪ್ರಭೇದಗಳಲ್ಲಿ ಹಾಸಹೊಕ್ಕಾದ 'ಸಾಮಾನ್ಯ ಧರ್ಮ' ಒಂದೇ ಎಂಬ ಅರಿವು ಜಾಗೃತವಾಯಿತು. ಕಾವ್ಯವಾಗಿರಲಿ ನಾಟಕವಾಗಿರಲಿ 'ರಸಾತ್ಮಕ' ಆಗಿದ್ದರಷ್ಟೇ ತಿರುಳನು ಹೊಂದಿದಂತಾಗುತ್ತದೆ ಎಂಬ ಪ್ರತ್ಯಭಿಜ್ಞೆ 'ಕಾವ್ಯೇಷು ನಾಟಕಂ ರಮ್ಯಮ್' ಎಂಬ ನಿಗಮನ ಸಾಧ್ಯವಾಗುವಂತೆ ಮಾಡಿತು.

ಈ ಹಿನ್ನೆಲೆಯನ್ನು ಪ್ರತ್ಯೇಕ ಕನ್ನಡ ಸಾಹಿತ್ಯ ಪರಂಪರೆಯ ಧೋರಣೆಗಳಿಗೆ ಅನ್ವಯಿಸಿ ನೋಡಿದರೆ ಪಾರ್ತಿಸುಬ್ಬನಂತಹ ಯಕ್ಷಗಾನ ಕವಿಯ ಕೃತಿಗಳು ಮೇಲೆ ಉಲ್ಲೇಖಿಸಿದ ಪಂಚಾಂಗ ಪೂರಿತವಾದ ರಂಗಪ್ರಯೋಗಗಳಿಂದಾಗಿಯೇ ರಸಿಕರನ್ನು ತಲುಪಬಲ್ಲದು ಎಂಬ ಸಾಧ್ಯತೆಯೇ ಆ ಕೃತಿಗಳ ಅಂತಃಸತ್ವವನ್ನು ಯಕ್ಷಗಾನ ಭಿನ್ನವಾದ ಸಾಹಿತ್ಯವಲಯ ಗಮನಿಸದಂತೆ ತಡೆಯಾಗಿರಬೇಕು. ಏಕಕಾಲದಲ್ಲಿ ಒಂದು ಕವಿಯ ಪ್ರಸಂಗದ ರಂಗಪ್ರಯೋಗ ಕಲಾಸ್ವಾದಕರ ಸಮ್ಮುಖದಲ್ಲಿ ಶ್ರೀಮಂತವಾಗಲು ಮತ್ತು ಸಾಹಿತ್ಯಾಸ್ವಾದಕರ ಸಮಕ್ಷ ತನ್ನ ಪ್ರತಿಭಾ ಶ್ರೀಮಂತಿಕೆಗೆ ಅರ್ಹವಾದ ಮಾನ್ಯತೆಯನ್ನು ಗಳಿಸುವುದರಲ್ಲಿ ವಿಫುಲವಾಗಲು ಅದು ಹೊಂದಲೇ ಬೇಕಾದ ಯಕ್ಷಗಾನದ ಪ್ರಬುದ್ಧ ಮತ್ತು ಅನನ್ಯವಾದ ಗಾಯನ, ವಾದನ, ವೇಷ–ಭೂಷಣ, ಆಂಗಿಕ, ವಾಚಿಕ, ಆಹಾರ್ಯಗಳ ಸಹಯೋಗವೇ ಕಾರಣ.

ಈ ವಿವೇಚನೆಯನ್ನು ಇನ್ನೊಂದು ಆಯಾಮದಲ್ಲೂ ಮುನ್ನಡೆಸಬಹುದು. ಯಕ್ಷಗಾನದ ಸ್ವರೂಪ ಮತ್ತು ಪ್ರಸಂಗದ ಸ್ವರೂಪ–ಸ್ವಭಾವಗಳನ್ನು ಪರಿಗಣಿಸಿದರೆ, ಯಕ್ಷಗಾನ ಕವಿಗೆ ಸಲ್ಲಬೇಕಾದ ನೆಲೆ ಉಳಿದ ಸಾಹಿತಿಗಳ ಸಾಲಿನಲ್ಲಲ್ಲ ಎಂದೂ ಹೇಳಬಹುದು. ಅವರಿರಬೇಕಾದುದು ಸಾಹಿತ್ಯ ಸಂಗೀತ ಛಂದಸ್ಸು ಪ್ರಯೊಗ ಪರಿಣಾಮಗಳನ್ನು ಲಕ್ಷಿಸಿಯೇ ತಮ್ಮ ಕೃತಿರಚನೆಗಳನ್ನು ಮಾಡಿ ಪ್ರಸಿದ್ಧರಾದ ಹರಿದಾಸ ಪರಂಪರೆಯ ಪುರಂದರ, ಕನಕನೇ ಮೊದಲಾದ ದಾಸಶ್ರೇಷ್ಠರ ಮತ್ತು ಶಾಸ್ತ್ರೀಯ ಸಂಗೀತ ಕ್ಷೇತ್ರದ ವಾಗ್ಗೇಯಕಾರರಾಗಿ ಮಾನ್ಯರಾದ ತ್ಯಾಗರಾಜ, ಮುತ್ತುಸ್ವಾಮಿ, ದೀಕ್ಷಿತ, ಶ್ಯಾಮಶಾಸ್ತ್ರೀ ಮುಂತಾದವರ ಸಾಲಿನಲ್ಲಿ. ಪಾರ್ತಿಸುಬ್ಬನಂತಹ ಶ್ರೇಷ್ಠ ಯಕ್ಷಗಾನ ಕವಿಗಳು ಈ ನೆಲೆಯಲ್ಲಿ ಮೌಲ್ಯಮಾಪನಕ್ಕೊಳಗಾದರೆ ಹೆಚ್ಚು ಔಚಿತ್ಯಪೂರ್ಣ ಎನಿಸಿತು.

ವಾಗ್ಗೇಯಕಾರರಾಗಿಯೋ, ಕವಿಯಾಗಿಯೋ ಯಕ್ಷಗಾನ ಪ್ರಸಂಗ ಕರ್ತೃವು ಪರಿಗಣಿತನಾಗಲು ಈ ವಿಧದ ವಿವೇಚನೆ ನಿಗಮನಗಳಿಂದಷ್ಟೇ ಸಾಧ್ಯವಾಗದು. ಅದಕ್ಕಾಗಿ ಪಾರ್ತಿಸುಬ್ಬನ ಕುರಿತಾಗಿ ಈಗ ನಡೆಯುತ್ತಿರುವಂತಹ ವಿಚಾರ ಸಂಕಿರಣಗಳು, ಸಂಶೋಧನೆಗಳು ಮತ್ತು ಇನ್ನಷ್ಟು ಬರಹಗಳು ಸಾಧ್ಯವಾಗಬೇಕು. ಈ ನೆಲೆಯಿಂದ ಯಕ್ಷಗಾನದಲ್ಲಿ 'ಪದ್ಯ' ಅಥವಾ 'ಪದ' ಎಂದು ಕರೆಯಲ್ಪಡುವ ಸಮಗ್ರ ಪ್ರಸಂಗದ

ಒಳಗಿನ ಬಿಡಿಬಿಡಿಯಾದ ರಚನೆಗಳನ್ನು ಅವುಗಳ ರಚನಾ ವೈಶಿಷ್ಟ್ಯ ಪ್ರದರ್ಶನ ಪರಿಣಾಮ, ವಿವರಣೆ ಮತ್ತು ವ್ಯಾಖ್ಯಾನಗಳ ಸಾಧ್ಯತೆ, ರಸಭೂಯಿಷ್ಠತೆ ಇತ್ಯಾದಿಗಳನ್ನು ಪರಿಗಣಿಸಿ ಅಧ್ಯಯನ ಮಾಡಬೇಕು. ಆಗ ಮಾತ್ರ ಕಾಲಗತಿಗನುಗುಣವಾಗಿ ಸಂಸ್ಕೃತದ ಕಾವ್ಯ ಪರಂಪರೆಯಲ್ಲಿ ನಾಟಕ ಅಗ್ರಮಾನ್ಯವೆನಿಸಿದಂತೆ ಕನ್ನಡ ಸಾರಸ್ವತಲೋಕದ ಮಾನ್ಯತೆ ಯಕ್ಷಗಾನ ಪ್ರಸಂಗ ಕಾವ್ಯಕ್ಕೆ ಹಾಗೂ ಕವಿಗಳಿಗೆ ದೃಢವಾದೀತು. ಅಥವಾ ದಾಸರ ಪದ ಮತ್ತು ಸಂಗೀತ ಕೃತಿಗಳಂತೆ ಯಕ್ಷಗಾನ ಪ್ರಸಂಗಗಳೂ ಪರಿಗಣಿತವಾಗಿ ಹರಿದಾಸರ ಹಾಗೂ ವಾಗ್ಗೇಯಕಾರರ ಶ್ರೇಷ್ಠತೆ ಯಕ್ಷಗಾನ ಕವಿಗಳಿಗೂ ಸಿದ್ಧಿಸೀತು.

ಪಾರ್ತಿಸುಬ್ಬನ ಕುರಿತಾಗಿ ಅವನ ಕೃತಿಗಳ ಪದಪ್ರಯೋಗ ವೈಶಿಷ್ಟ್ಯಗಳನ್ನು ಗಮನಿಸುವ ಮೂಲಕ ಅದರ ಶ್ರೇಷ್ಠತೆಯನ್ನು ಬಿಂಬಿಸಲು ಪ್ರಕೃತ ಆತನ ರಾಮಾಯಣ ಪ್ರಸಂಗಗಳಿಂದ ಮಾತ್ರ ಕೆಲವಾರು ಪದಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ.

**ಪ್ರಸಂಗ – ಶ್ರೀರಾಮ ಪಟ್ಟಾಭಿಷೇಕ**
**ಬಾಲೆ ಕೇಳ್ಪೂಮಾಲೆ । ಚಾರು–ಶೀಲೆ ನಿನ್ನ ಕಾಂತ ।**
**ಭೂಲೋಕವ ರಾಮನಿಗೆ । ಪಾಲಿಸಬೇಕೆಂದು ಹೀಗೆ ॥**

– ಇದು ಶ್ರೀರಾಮನನ್ನು ವನವಾಸಿಯಾಗಿಸುವ ಸಂಚುಹೂಡಿ ಮಂಥರೆ ಆತನ ಯೌವನ ರಾಜ್ಯಾಭಿಷೇಚನದ ಸುದ್ದಿ ಕೇಳಿ ರಾಣಿಯಾದ ಕೈಕೇಯಿ ಬಳಿ ಬಂದು ಆಡುವ ಮೊದಲ ಮಾತು. ಇಲ್ಲಿನ ಪ್ರಯೋಗ ವೈಶಿಷ್ಟ್ಯ ಗಮನಿಸಿ. ಸುವಾಸನಾ ಭರಿತ ಹೂವಿನಮತೆ ನಿನ್ನನ್ನು ಹೊತ್ತು ನಡೆಯುತ್ತಿದ್ದ ದಶರಥ ಈಗ ಬಾಡಿದ ಹೂವನ್ನು ಕಿತ್ತೆಸೆವಂತೆ ಅವಗಣಿಸುತ್ತಿದ್ದಾನೆ ಎಂಬ ಧ್ವನಿ ಪೂಮಾಲೆ ಎಂಬ ಒಂದು ಪ್ರಯೋಗದಿಂದ ಸೂಚಿತವಾಗಿದೆ. ಬಾಲೆ ಎಂಬ ಸಂಬೋಧನೆಯೇ ಕಪಟವರಿಯದ ಮುಗ್ಧೆ ನೀನು ಎಂಬ ನೆಲೆಯಿಂದ. ಚಾರುಶೀಲೆ ಎನ್ನುತ್ತಾ ನಿನ್ನ ಒಳ್ಳೆಯತನ ಸೌಶೀಲ್ಯಗಳೇ ನಿನಗೆ ಮುಳುವಾಯಿತು ಎಂದು ಮುಂದೆ ಮಂಥರೆ ಉಪಕ್ರಮಿಸುತ್ತಾಳೆ. ರಾಮ ಚರಿತೆಗೆ ಮಂಥರೆಯ ಮೂಲಕ ಎಷ್ಟು ಸೊಗಸಾದ ಪ್ರವೇಶಿಕೆ!

**ಪ್ರಸಂಗ – ಶ್ರೀರಾಮ ಪಟ್ಟಾಭಿಷೇಕ**
**ಕಾಂತೆ ಕೇಳಿಷ್ಟೊಂದು ಮಾತಿ । ಗಿಂಥದೊಂದು ಸಿಟ್ಟೇ ।**
**ಅಂತರಂಗ ಶುದ್ಧವಾಗಿ । ಬೇಡಿಕೊ ನಾ ಕೊಟ್ಟೆ ॥**

– ಈ ಪದ್ಯದಲ್ಲಿ ದಶರಥ ಪಟ್ಟಾಭಿಷೇಕ ಸಮಾರಂಭದಲ್ಲಿ ಭಾಗಿಯಾಗದ ಕೈಕೇಯಿಯನ್ನು ಓಲೈಸಲು ಬಂದು ಅವಳ ಅಪೇಕ್ಷೆಗನುಗುಣವಾಗಿ ಹಿಂದೆ ಕೊಟ್ಟ

ವರಗಳೆರಡನ್ನೂ ಈಗ ಈಡೇರಿಸುವ ಭರವಸೆ ನೀಡುತ್ತಿದ್ದಾನೆ. ಓಲೈಕೆಯ ಜೊತೆಯಲ್ಲಿ ಆತನ ಅಂತರಂಗದ ಸಂದೇಹ ಅಂತರಂಗ ಶುದ್ಧವಾಗಿ ಬೇಡಿಕೋ ಎಂಬ ಪ್ರಯೋಗದಿಂದ ವೇದ್ಯ. ರಾಮಾಯಣದಲ್ಲಿ ವಾಲ್ಮೀಕಿ ರಾಮನ ಬಳಿ ಪಟ್ಟಾಭಿಷೇಚನದ ಕುರಿತು ಮಾತನಾಡುತ್ತಾ ಭರತ ಒಳ್ಳೆಯವನಾದರೂ ಆತನಿಂದ ಈ ಸತ್ಕಾರ್ಯಕ್ಕೆ ಭಂಗ ಬರುವ ಸಾಧ್ಯತೆಯನ್ನು ಒಗಟಿನಂತೆ ತಿಳಿಸುತ್ತಾನೆ. ವಾಲ್ಮೀಕಿಯ ಆ ವಿವರಣೆಯ ಸಾರವನ್ನು ಪಾರ್ತಿಸುಬ್ಬ ಈ ಒಂದು ಪ್ರಯೋಗದಲ್ಲಿ ಸಂಗ್ರಹಿಸಿಕೊಟ್ಟಿದ್ದಾನೆ. "ಕಿರಿದರೊಳ್ ಪಿರಿದರ್ಥ" ಹೇಳುವ ಕವಿಕೌಶಲ ಪ್ರಕಟವಾದ ವಿಧಾನವಿದು.

**ಪ್ರಸಂಗ – ಶ್ರೀರಾಮ ಪಟ್ಟಾಭಿಷೇಕ**
**ಕಂಬುಕಂಠಿನಿ ಚಾರುಶೀಲೆ । ಕಮಲಮುಖಿ ॥**
**ಕುಂಭಕುಚೆ ಪುತ್ಥಳಿಯ ಬೊಂಬೆ ಪ್ರತಿರಂಭೆ ॥ಪ॥**

– ರಾಮನನ್ನು ಕಾಡಿಗಟ್ಟಬೇಕೆಂಬ ಕೈಕೇಯಿಯ ವರದ ಅಪೇಕ್ಷೆಯನ್ನು ಕೇಳಿದ ಕ್ಷಣದಲ್ಲೇ ಕುಸಿದ ದಶರಥ ಮುಂದೆ ವಿಲಾಪಿಸುವ ಪದ್ಯವಿದು. ಪಾರ್ತಿಸುಬ್ಬನ ಔಚಿತ್ಯಜ್ಞಾನಕ್ಕೆ ದ್ಯೋತಕವಾಗಿದೆ ಈ ಭಾಗ. ಸಂದರ್ಭ ತಿಳಿಯದೆ ಓದಿದರೆ ಶೃಂಗಾರಭರಿತ ಸೌಂದರ್ಯ ವರ್ಣನೆಯಂತೆ ಭಾಸವಾಗುವ ಈ ರಚನೆ ಪ್ರಸಂಗದ ಸನ್ನಿವೇಶದಲ್ಲಿ ಬಿಂಬಿಸುವ ಚಿತ್ರವೇ ಬೇರೆ. ಕೈಕೇಯಿಯ ಸ್ವಭಾವ ವಿರುದ್ಧ ಪರಿವರ್ತನೆ ಹೇಗಾಗಿದೆ ಎನ್ನುವುದನ್ನು ಇಲ್ಲಿ ಬಿಂಬಿಸಲಾಗಿದೆ. ಕಂಬುಕಂಠಿನಿ ಎಂಬಲ್ಲಿ ಸಹಜವಾದ ಶಂಖದಂತಹ ಕಂಠವುಳ್ಳವಳು ಎಂದು ಹೇಳುತ್ತಾ ಈಗ ಅಸಹಜವಾದ ಕರ್ಕಶಧ್ವನಿ ಸಹಿಸಲಾಗುತ್ತಿಲ್ಲಾ ಎಂದೂ, ಚಾರುಶೀಲೆ ಎನ್ನುತ್ತಾ ಪ್ರಕೃತ ಆಡುತ್ತಿರುವುದು ಅಸಹಜ ಶೈಲಿಯ ಮಾತು ಎಂದೂ, ಕಮಲಮುಖಿ ಆಗಿ ಸೂರ್ಯನನ್ನು ಅನುಸರಿಸುವ ಕಮಲದಂತೆ ಸಹಜವಾಗಿ ಪತಿಯನ್ನನುಸರಿಸುವವಳು ನೀನು ಎನ್ನುತ್ತಾ ಇಂದು ಸೂರ್ಯನಿಗೆ ವಿಮುಖವಾದ ಕಮಲದಂತೆ ಪತಿಗೆ ಪ್ರತಿಕೂಲೆ ಆದೆ ಎಂದೂ ಕುಂಭಕುಚೆ ಎಂಬಲ್ಲಿ ರಾಮನ ಪಾಲಿಗೆ ವಾತ್ಸಲ್ಯಪೀಯೂಷ ಉಣಿಸುತ್ತಿದ್ದವಳು ನೀನು ಎನ್ನುತ್ತಾ ಪ್ರಕೃತ ಅದು ವಿಷಭರಿತ ಸ್ತನ್ಯವೆಂದೂ ಪುತ್ಥಳಿಯ ಬೊಂಬೆ ಎಂದು ವರ್ಣಿಸುತ್ತಾ ಸದ್ಯ ಅದು ನಿರ್ಭಾವುಕವಾದುದೆಂದೂ ಪ್ರತಿರಂಭೆ ಎಂದು ಅಪ್ಸರಾಂಗನೆಯ ಜೊತೆ ಹೋಲಿಸುತ್ತಾ ಈಗ ದೇವಗಣಿಕೆಯಂತೆ ಆಕೆಯ ನಿಷ್ಠೆಯಲ್ಲೂ ಚಾಂಚಲ್ಯಬಂತು ಎಂದೂ ಧ್ವನಿಸುತ್ತಿರುವುದು ಕವಿಯ ಪ್ರತಿಭಾವಿಲಾಸ.

**ಪ್ರಸಂಗ – ಶ್ರೀರಾಮ ಪಟ್ಟಾಭಿಷೇಕ**
**ಲೇಸನಾಡಿದೆಯವ್ವ ಈ ಸ್ವಲ್ಪ ಕೆಲಸಕ್ಕೆ ॥**
**ಈಸು ಚಿಂತೆಗಳೇಕೆ ಹೇ ಸುಗುಣಾಢ್ಯೆ ॥**

– ಇದು ಚಿಕ್ಕಮ್ಮನಾದ ಕೈಕೇಯಿಯಿಂದ ತಾನು ವನವಾಸಿಯಾಗಿರಬೇಕೆಂದು ತಿಳಿದ ಮರುಕ್ಷಣ ಶ್ರೀರಾಮನ ಪ್ರತಿಕ್ರಿಯೆ. ಸರಳ ಪ್ರಯೋಗದ ಮೂಲಕ ರಾಮನಂತಹ ಪಾತ್ರದ ಸ್ವಭಾವಚಿತ್ರಣ ಮಾಡುವ ಕೌಶಲವನ್ನು ಇಲ್ಲಿ ಗಮನಿಸಬಹುದು. ಕಠಿಣ ನಿರ್ಣಯಗಳನ್ನು ತಳೆಯುವಲ್ಲಿ ರಾಮನ ಸ್ವಭಾವದಲ್ಲಿ ಪ್ರಕಟವಾಗುವ ಲಾಘವ, ನಿರ್ಮೋಹತ್ವ, ಧರ್ಮಬದ್ಧತೆ, ಮಾತಾಪಿತೃಗಳ ಕುರಿತಾದ ಶ್ರದ್ಧೆ ಇವುಗಳೆಲ್ಲವನ್ನೂ ಪ್ರಕಟಿಸುತ್ತಾ ಅದಕ್ಕಿಂತಲೂ ಹೆಚ್ಚಾಗಿ ಅಷ್ಟು ಭೀಕರ ನಿರ್ಣಯವನ್ನು ಅಂಗೀಕರಿಸುವಲ್ಲಿ ವ್ಯಕ್ತವಾದ ಆತನ ಅತಿಮಾನವತ್ವವೂ ಇಲ್ಲಿ ಸುಂದರವಾಗಿ, ಸಶಕ್ತವಾಗಿ ಅಭಿವ್ಯಕ್ತಿಗೊಂಡಿದೆ.

**ಪ್ರಸಂಗ – ಶ್ರೀರಾಮ ಪಟ್ಟಾಭಿಷೇಕ**
**ಅಣ್ಣದೇವ ನೀನಯ್ದುವದೆಲ್ಲಿ ।**
**ಪುಣ್ಯವಾರಿಧೇ ಪುರುಷರತ್ನವೆ ।**
**ಇನಕುಲೇಂದ್ರನೆ । ಏನು ಭಾವನೆ ।**
**ಮನಸಿದೇನಯ್ಯ । ಮನಸಿಜನಯ್ಯ ॥**
**ಪೊಡವಿ ಕೈಕೆಗೆ । ಮಾರಿಹೋಯಿತೆ ।**
**ದೃಢವ ಪಾಲಿಸೊ । ದುಷ್ಟಮರ್ದನ ॥**

– ಇದು ವನವಾಸಕ್ಕೆ ಶ್ರೀರಾಮ ಹೊರಟ ವರ್ತಮಾನ ತಿಳಿದು ದುಃಖಾಕ್ರೋಶಗಳಿಂದ ಆತನಿಗೆ ಇದಿರಾಗಿ ಬಂದ ಲಕ್ಷ್ಮಣನ ಪ್ರತಿಕ್ರಿಯೆ. ರಾಮನ ಕುರಿತಾಗಿ ಲಕ್ಷ್ಮಣನ ಸದ್ಭಾವ ಪೂರ್ವಾರ್ಧದಲ್ಲಿ ಪ್ರಕಟವಾದರೆ ಉತ್ತರಾರ್ಧದಲ್ಲಿ ಪೊಡವಿ ಕೈಕೆಗೆ ಮಾರಿಹೋಯಿತೆ ಎನ್ನುತ್ತಾ ಸೂರ್ಯವಂಶದ ಕುಲಾಚಾರಕ್ಕೆ ವಿರುದ್ಧವಾದ ದುರ್ವರ್ತನೆ ಕೈಕೇಯಿಯದ್ದು ಎಂದು ಸೂಚಿಸಿ ದೃಢವ ಪಾಲಿಸೊ ದುಷ್ಟಮರ್ದನ ಎಂಬಲ್ಲಿ ಮಾನವತೆಗೆ ಬಾಹಿರವಾದ ರಾಕ್ಷಸೀ ಪ್ರವೃತ್ತಿಯನ್ನು ತೋರುತ್ತಿರುವ ಕೈಕೇಯಿ ಚಿಕ್ಕಮ್ಮನಾಗಿದ್ದರೂ ನಿಗ್ರಹಯೋಗ್ಯಳು ಎಂದು ಸೂಚಿಸುತ್ತಿದೆ. ಸಮಗ್ರವಾಗಿ ಲಕ್ಷ್ಮಣನ ಈ ಪ್ರತಿಕ್ರಿಯೆ ಆ ರಾಮಾನುಜನ ವ್ಯಕ್ತಿತ್ವ–ಭಾವಗಳನ್ನು ಎಷ್ಟು ಚೆನ್ನಾಗಿ ಸೆರೆಹಿಡಿದಿದೆ!

**ಪ್ರಸಂಗ – ಶ್ರೀರಾಮ ಪಟ್ಟಾಭಿಷೇಕ**
**ಸುಮ್ಮನಿರ್ರೈ ಭರತ ಬರುವ । ಧರ್ಮವನ್ನು ಅರಿಯೆ ನೀನು ।**
**ಹೆಮ್ಮೆಗಾರನಲ್ಲ ಗುಣದಿ । ನಮ್ಮ ಸಹಜನು ॥**

– ಇದು ಚಿತ್ರಕೂಟಕ್ಕೆ ರಾಮನನ್ನು ಅರಸುತ್ತಾ ಭರತ ಬರುತ್ತಿರುವುದನ್ನು ದೂರದಿಂದಲೇ ಗಮನಿಸಿದ ಲಕ್ಷ್ಮಣ, ರಾಮನ ಬಳಿಗೆ ಧಾವಿಸಿ ಬಂದು ಅಧಿಕಾರದ ಮದದಿಂದ ಬರುತ್ತಿರುವ ಭರತನನ್ನು ದಂಡಿಸಲು ತನಗೆ ಅಪ್ಪಣೆ ನೀಡು ಎಂದು

ಬೇಡಿದಾಗ ಅದಕ್ಕೆ ರಾಮನು ನೀಡುವ ಪ್ರತಿಕ್ರಿಯೆ. ಪಾರ್ತಿಸುಬ್ಬ ಈ ಪದ್ಯದಲ್ಲಿ ರಾಮನ ಸಹಜ – ಪ್ರಶಾಂತ ಮನಃಸ್ಥಿತಿಯನ್ನು ತೋರಿಕೊಡುವ ಜೊತೆಯಲ್ಲೇ ಧರ್ಮವನ್ನು ಅರಿಯೆ ನೀನು ಎಂಬಲ್ಲಿ ತನ್ನ ತಮ್ಮ ಧರ್ಮಾತಿಕ್ರಮಣವನ್ನು ಮಾಡಲಾರ ಎಂಬ ಆತನ ವಿಶ್ವಾಸವೂ ಚಿತ್ರಿತವಾಗಿದೆ. ನಮ್ಮ ಸಹಜನು ಎಂಬಲ್ಲಿ ಯಜ್ಞಸಂಭವರೆನಿಸಿ ಜೊತೆಯಾಗಿ ಜನಿಸಿದ ನಾಲ್ವರಲ್ಲೂ ವೇದಬಾಹಿರವಾದ ದೋಷವಿರದು ಎಂಬ ರಾಮನ ವೈದಿಕ ಶ್ರದ್ಧೆ ಹಾಗೂ ಸ್ಥಿತಪ್ರಜ್ಞೆ ಸುವೇದ್ಯ.

**ಪ್ರಸಂಗ – ಪಂಚವಟಿ**

**ಭೋರ್ಗರೆವ ರಕ್ಕಸರ ದಂಡು ಬಾಯ್ಬಿಟ್ಟೊದರೆ ।**
**ನಿರ್ಘೋಷದಬ್ಬರದ ಗಮಕದಾರ್ಭಟೆಯ ಸಿಡಿ ।**
**ಲೊಗ್ಗರದ ಬೊಬ್ಬೆಯಿಂ ಶೂರ್ಪಣಖೆ ಬಂದಳಾ ಕಾನನಕೆ ಕುಲಗೇಡಿಯು ॥**

– ಪಂಚವಟಿಯಲ್ಲಿ ಘೋರಾಕಾರದ ರಾಕ್ಷಸಿ ಶೂರ್ಪನಖಿಯ ಪ್ರವೇಶವಾಗುವ ಸಂದರ್ಭದ ಪದ್ಯ. ಇದರಲ್ಲಿ ರಾಕ್ಷಸರ ಅಬ್ಬರ, ಸ್ವಭಾವಗಳನ್ನು ಸೂಚಿಸುವ ಪದಪ್ರಯೋಗಗಳು ಗಮನಾರ್ಹ. ಕಾನನದಲ್ಲಿ ವೇದಘೋಷಕ್ಕೆ ಪ್ರತಿಯಾಗಿ ಅದನ್ನು ದಮನಿಸುವಂತೆ ರಾಕ್ಷಸರ ಆರ್ಭಟವನ್ನೂ ನಿಘೋಷದಬ್ಬರದ ಗಮಕದಾರ್ಭಟೆಯ ಸಿಡಿಲೊಗ್ಗರದ ಬೊಬ್ಬೆಯಿಂ ಎಂಬ ಪ್ರಯೋಗದ ಮೂಲಕ ಪಾರ್ತಿಸುಬ್ಬ ಮೊಳಗಿಸುತ್ತಾ, ಬಂದವಳು ಕುಲಗೇಡಿಯು ಎಂಬ ಒಂದು ಪ್ರಯೋಗದಲ್ಲಿ ಭವಿಷ್ಯದಲ್ಲಿ ಆಕೆಯಿಂದಾಗಿ ರಾಕ್ಷಸ ಕುಲದ ಸರ್ವನಾಶ ಆಗಲಿರುವುದನ್ನು ಹೊಳೆಯಿಸಿ ಬಿಡುತ್ತಾನೆ.

**ಪ್ರಸಂಗ – ಪಂಚವಟಿ**

**ಮದನನ ಪಟ್ಟದರಾಣಿ । ಮೊದಲೆ ಬಂದುದಿಲ್ಲ ।**
**ಚದುರೆ ಸಣ್ಣವಳೊಬ್ಬಳ । ಮದುವೆಯಾದೆನಲ್ಲ ॥**

– ಶೂರ್ಪನಖಿಯ ಕಾಮಾಭ್ಯರ್ಥನೆಗೆ ಪಾರ್ತಿಸುಬ್ಬನ ರಾಮ ಹೀಗೆ ಪ್ರತಿಕ್ರಿಯಿಸುತ್ತಾನೆ. ಮೇಲ್ನೋಟಕ್ಕೆ ಬದುಕಲ್ಲಿ ಸತಿಯಾದ ಸೀತೆಗಿಂತ ಮೊದಲೇ ನೀನು ಸಿಕ್ಕಿದ್ದಿದ್ದರೆ ತಾನು ಮದುವೆಯಾಗುತ್ತಿದ್ದೆ ಎಂದು ರಾಮ ಹೇಳಿದಂತೆ ಭಾಸವಾಗುತ್ತದೆ. ಆದರೆ ಸೀತೆಯನ್ನು ಮದುವೆಯಾಗುವುದಕ್ಕೆ ಮೊದಲು ರಾಮ ತಾಟಕಿಯಂತಹ ರಾಕ್ಷಸಿಯನ್ನು ವಧಿಸಿದ ರಾಮಾಯಣದ ಸಂದರ್ಭವನ್ನು ಇಲ್ಲಿ ನೆನಪಿಸಿಕೊಂಡರೆ ಈ ಪದ್ಯಕ್ಕೆ ಬೇರೆಯೇ ಆಯಾಮದ ಅರ್ಥ ದಕ್ಕಿಬಿಡುತ್ತದೆ. ಮದನನ ಪಟ್ಟದರಾಣಿ ಎಂಬುದು ರಾಕ್ಷಸೀ ಮಾಯೆಯ ವಿಡಂಬನೆ ಎಂದೂ ಮೊದಲೇ ಬಂದುದಿಲ್ಲ ಎಂಬಲ್ಲಿ ಸೀತಾಕಲ್ಯಾಣಕ್ಕಿಂತ ಮೊದಲೇ ಬಂದರೆ ಆಗಲೇ ನಿಗ್ರಹಿಸುತ್ತಿದ್ದೆ ಎಂದೂ ಧ್ವನಿಸುತ್ತದೆ. ಇದು ಕವಿಶಕ್ತಿ.

ಪ್ರಸಂಗ – ಸೀತಾಪಹಾರ

**ಲವನೆ ಕೇಳ್ ಸುರನರುಭುಜಂಗಮು ।**
**ಭುವನದಲ್ಲಣ ದಶವದನನು ।**
**ತ್ಸವದೊಳೊಡ್ಡೋಲಗದೊಳಿದ್ದನು ಬಹಳ ವಿಭವದಲಿ ।**
**ಪವನ ಶಿಖಿ ಯಮ ನಿಋತಿ ಹರಿ ವೈ**
**ಶ್ರವಣ ವರುಣಾದಿಗಳು ಬೆಸಸೇ**
**ನೆವಗೆ ತವಗೆನುತಿದ್ದಿರಿದ್ದೆಸೆಯಲಿ ದಶಾನನ ॥**

**ಅಣುಗಕೇಳಾ ಸಮಯದಲಿ ನೆರೆ**
**ಹಣಿದ ಮೂಗಿನ ಹರಿದ ತುಟಿಗಳ**
**ಜುಣುಗುಕಿವಿಗಳ ಜರಿದಹುಣ್ಣಿನ ಕೊರೆದಕದಪುಗಳ ।**
**ವ್ರಣದ ದುರ್ಗಂಧದ ಮಹಾಭೀ**
**ಷಣದ ರಕ್ಕಸಿ ಬಂದಳಾ ರಾ**
**ವಣನ ರಚಿತ ಸಭಾಂತರಾಳಕೆ ಮೃತ್ಯುರೂಪಿನಲಿ ॥**

**ದಶಕಂಠನನುಜೆಯ ಕಂಡನು । ಕಾಣು ।**
**ತಸುರ ಚಿತ್ತದಿ ಭ್ರಮೆಗೊಂಡನು ॥**
**ಎಸೆವ ಓಲಗವ ಬೀಳ್ಕೊಂಡನು । ಅತಿ ।**
**ಕುಶಲದಿಂದೊಳಗೆದ್ದು ಬಂದನು ॥**

– ಇಲ್ಲಿನ ಮೊದಲ ಪದ್ಯದಲ್ಲಿ ಹದಿನಾಲ್ಕು ಲೋಕಗಳನ್ನೂ ನಡುಗಿಸಿದ, ದೇವತೆಗಳನ್ನೂ ಸದೆಬಡಿದ ರಾವಣನ ಓಲಗದ ಚಿತ್ರಣವಿದ್ದರೆ, ಮುಂದಿನ ಪದ್ಯ ವಿರೂಪಗೊಂಡ ದುಃಸ್ಥಿತಿಯಲ್ಲಿ ಆ ಓಲಗವನ್ನು ಪ್ರವೇಶಿಸಿದ ಶೂರ್ಪನಖಿಯ ವರ್ಣನೆಯದು. ಮೂರನೇ ಪದ್ಯ ಅದನ್ನು ನೋಡಿದಕೂಡಲೇ ಸಭಾವಿಸರ್ಜನೆ ಮಾಡಿ ಶೂರ್ಪನಖಿಯನ್ನು ರಾವಣ ವಿಚಾರಿಸಲು ಉದ್ಯುಕ್ತನಾದ ಎಂಬುದರ ವಿವರಣೆ. ಯಕ್ಷಗಾನದಲ್ಲಿ ನವನವೀನ ವಿಧಾನದಲ್ಲಿ ರಾವಣನ ಅರ್ಥ ವಿವರಣೆಯನ್ನು ಈ ಪದ್ಯಗಳನ್ನಾಧರಿಸಿಯೇ ಮಾಡಿದ ಶೇಣಿ ಗೋಪಾಲಕೃಷ್ಣಭಟ್ಟರಂತಹ ಪ್ರಚಂಡ ಪ್ರತಿಭಾಶಾಲಿ ಇದನ್ನಾಧರಿಸಿಯೇ ರಾಮ–ರಾವಣ ವಿದ್ವೇಷದ ಅನಿವಾರ್ಯತೆಯನ್ನು ಚಿತ್ರಿಸುತ್ತಿದ್ದರು. ಸಭೆಯಲ್ಲಿ ತನ್ನ ತಂಗಿಗೆ ಅವಮಾನವಾದುದು ಸರ್ವರಿಗೂ ವೇದ್ಯವಾದ ಬಳಿಕ ರಾಕ್ಷಸಾಧಿಪತಿಯಾದ ತನಗೆ ರಾಮನನ್ನು ವಿರೋಧಿಸದೆ ನಿರ್ವಾಹವಿಲ್ಲ ಎಂದು ಮುಂದುವರಿಯುತ್ತಾ ರಾಮ–ರಾವಣ ವಿರೋಧಕ್ಕೆ ಸೀತಾ ಕಾಮನೆಯಿಂದ ಭಿನ್ನವಾದ ಅನ್ಯ ಆಯಾಮಗಳೂ ಇದ್ದುವು ಎಂದು ಪ್ರತಿಪಾದಿಸುತ್ತಾರೆ. ಒಂದು ಕಾವ್ಯವನ್ನು

ಇನ್ನೊಂದು ಕವಿ ವಿಸ್ತರಿಸುವ ಬೆರಗುಹುಟ್ಟಿಸುವ ಬಗೆಯಿದು. ಮೊದಲಿನ ಪದ್ಯಗಳು ತೊರವೆರಾಮಾಯಣದವುಗಳಾಗಿದ್ದು ಮೂರನೆಯ ಪದ್ಯಕ್ಕೆ ಹಿನ್ನೆಲೆಯನ್ನೊದಗಿಸುತ್ತವೆಯೆಂಬುದನ್ನು ಗಮನಿಸಿ.

**ಪ್ರಸಂಗ – ಸೀತಾಪಹಾರ**
**ಜನಕನಂದನೆಯಂತೆ । ಸೀತೆಯೆಂಬವಳಂತೆ ।**
**ಘನಸೊಬಗಿನವಳಂತೆ । ರಾಘವನ ಕಾಂತೆ ॥**

**ತರಲು ಪೋಪೆನು ನಾನು । ತಂದರಾಕೆಯು ನೀನು ।**
**ಎರಕವಾಗಿರುವ ಬಗೆ । ಪೇಳಬೇಕೆನಗೆ ॥**

– ಸೀತೆಯನ್ನು ಅಪಹರಿಸಲು ಹೊರಟ ರಾವಣ ಅದರ ಕುರಿತಾಗಿ ತನ್ನ ಸತಿಯಾದ ಮಂಡೋದರಿಯ ಪೂರ್ವಾನುಮತಿ ಕೇಳುವ ಪದ್ಯ. ಪರಸತಿಯನ್ನು ಅಪಹರಿಸಲು ತನ್ನ ಸತಿಯಲ್ಲೇ ರಾವಣಾನಂತಹ ದುಷ್ಟ ಅಭಿಮತ ಕೇಳುವುದು ತೋರಿಕೆಗೆ ಅಸಂಗತವಾದ ವಿಚಾರ. ಆದರೆ ಈ ಪದ್ಯಕ್ಕೆ ಮುಂದಿನ ಸಂದರ್ಭದಲ್ಲಿ ಶೇಣಿಯವರ ರಾವಣ ಕಲ್ಪಿಸಿಕೊಡುವ ಅರ್ಥದ ನೆಲೆಯನ್ನು ಗಮನಿಸಿದರೆ, ಇದು ತುಂಬಾ ಸುಸಂಗತ ಎಂದು ಭಾಸವಾಗುತ್ತದೆ. ರಾವಣಾವಸಾನಕ್ಕಿಂತ ಪೂರ್ವದಲ್ಲಿ ಮಂಡೋದರಿಯಲ್ಲಿ ಆತ್ಮನಿವೇದನೆ ಮಾಡುತ್ತಾ ಶೇಣಿಯವರ ರಾವಣ ಇದರ ಒಳನೋಟವನ್ನು ವಿವರಿಸುತ್ತಾನೆ. ತಾನು ವೈಕುಂಠ ದ್ವಾರಪಾಲಕರಾದ ಜಯ–ವಿಜಯರಲ್ಲಿ ಜಯನೆಂಬವನು ಶಾಪಗ್ರಸ್ತನಾಗಿ, ಪತಿತನಾಗಿ ರಾವಣನೆನಿಸಿದೆ ಎಂದು ಪೂರ್ವಕತೆಯನ್ನು ಹೇಳುತ್ತಾನೆ. ಶಾಪ ವಿಮೋಚನೆಗೆ ವಿಷ್ಣು ವಿರೋಧ ಅನಿವಾರ್ಯ ಆದಾಗ ಸೀತಾವ್ಯಾಜ ನಿಮಿತ್ತವಾಗಿ ದೊರಕಿತು ಆದುದರಿಂದ ನನ್ನ ಗೃಹಲಕ್ಷ್ಮಿಯಾದ ನಿನ್ನಲ್ಲಿ ಮೋಕ್ಷಲಕ್ಷ್ಮಿಯಾದ ಸೀತೆಯನ್ನು ಬರಮಾಡಿಕೊಳ್ಳುವುದಕ್ಕೆ ಕೇಳಿದ ಮಾತು ತರಲು ಪೋಪೆನು ನಾನು ತಂದರಾಕೆಯು ನೀನು ಎರಕವಾಗಿರುವ ಬಗೆ ಪೇಳಬೇಕೆನಗೆ ಎಂಬುದು. ನಿನಗೆ ಆಗ ಆ ಮಾತು ಸಂಸಾರ ಬಂಧನ ಮತ್ತು ಮೋಕ್ಷಗಳ ಮಧ್ಯೆ ಹೊಂದಾಣಿಕೆಯನ್ನು ಸಾಧಿಸಲು ನಾನು ಕೇಳುತ್ತಿರುವೆ ಎಂದು ತಿಳಿಯದೆ ಹೋಯಿತು.... ಎಂದು ಮುಂದುವರಿಯುತ್ತಾನೆ. ವಿಭಿನ್ನ ಆಕರ ಗ್ರಂಥಗಳ, ಪುರಾಣಗಳ, ಸಮನ್ವಯವನ್ನು ಸಾಧಿಸಬಲ್ಲ ಪ್ರತಿಭೆಯ ನಿಲುಕಿಗಷ್ಟೇ ಈ ವಿಧದ ಕಾಣ್ಕೆಗಳು ದಕ್ಕೀತು. ಪಾರ್ತಿಸುಬ್ಬನಂತಹ ಮಹಾಕವಿಯ ರಚನೆಯನ್ನು, ಶೇಣಿಯಂತಹ ಮಹಾಕವಿ ಪ್ರತಿಭೆಯ ಅರ್ಥಧಾರಿ ಬಗೆಯಲು ಹೊರಟರೆ ಮೊಗೆದಷ್ಟೂ ಲಭ್ಯವಾಗುತ್ತಿದ್ದುದು ರತ್ನಗಳೇ! ಇದೊಂದು ನಿದರ್ಶನ ಮಾತ್ರ.

ಪ್ರಸಂಗ – ಸೀತಾಪಹಾರ

**ನೋಡಿದೆಯಾ । ರಾಮ । ನೋಡಿದೆಯಾ ॥ಪ॥**
**ದೊಡ್ಡ । ಕಾಡಿನಿಂದಲೋಡಿಬಂದು । ಆಡುವಂಥ ಪೊಂಮಿಗವ ॥ಅ.ಪ॥**
**ಚಿನ್ನದ ಹಾಗಿರುವ ಮೆಯ್ಯ । ಬಣ್ಣದ ಸುತ್ತಲೂ ಪಂಚ ।**
**ವರ್ಣದ ರೇಖೆಗಳು ಬಂದ । ಚೆಂದವ ನೋಡು ॥**
**ಸಣ್ಣ ಸಣ್ಣ ಕಾಲಬೆರಳು । ಸಾಲಿನುಗುರು ಭಾವಂಗಳ ।**
**ತನ್ನಂಗ ದಿನ್ನಂಗ ಧಿಕ್ಕಿಟ । ತೋಯೆಂದು ಕುಣಿವ ಮೃಗವ ॥**

– ಮಾಯಾಮೃಗವನ್ನು ನೋಡಿ ಆಕರ್ಷಿತಳಾದ ಸೀತೆ ರಾಮನ ಬಳಿ ಬಂದು ಅದರ ಸೊಬಗನ್ನೂ, ಕುಣಿತವನ್ನೂ ವರ್ಣಿಸುವ ಪದವಿದು. ಅಮೂರ್ತವಾದ ಸೌಂದರ್ಯವನ್ನು ಕಲೆಯನ್ನು ಸಾಹಿತ್ಯ ಕಟ್ಟಿಕೊಡುವ ವಿಧಾನ ಚಿತ್ತಾಕರ್ಷಕವಾಗಿದೆ.

ಪ್ರಸಂಗ – ವಾಲಿ ಸುಗ್ರೀವರ ಕಾಳಗ

**ಜಾಣನಹುದಹುದೋ । ಸಂಗರಕತಿ ।**
**ತ್ರಾಣ ನಹುದಹುದೊ ॥**
**ಕ್ಷೋಣಿಯೊಳ್ ನಿನಗೆಣೆ । ಗಾಣೆ ಪರಾಕ್ರಮಿ ॥ಜಾಣ॥ಪ॥**
**ಇನ ವಂಶದಸುಗಳೊಳಗೆ । ಹಿಂದೆ ।**
**ಜನಿಸಿದವರು ನಿನ್ನ ಕೆಳಗೆ ॥**
**ಘನಚೋರತನದ ಶಿಖಂಡಿ ವಿದ್ಯೆಯನೆಷ್ಟು ।**
**ದಿನ ಸಾಧಿಸಿದೆಯೊ ನೀನು । ಲಂಡಿಗಳ ದು ।**
**ರ್ಗುಣವ ಕೈಗೊಂಡೆಯೇನು । ನಿನ್ನಂಥ ಕು।**
**ಜನರಿಲ್ಲ ಸಾಕ್ಷಿಗಿನ್ನು । ರಾಘವ ಬಲು ॥ಜಾಣ॥**
**ಗಂಡನಿಲ್ಲದ ಹೆಂಗಳಂತೆ । ನಾಚಿ ।**
**ಕೊಂಡು ನೀ ಮರೆಯಲ್ಲಿ ನಿಂತೆ ॥**
**ಹೆಂಡತಿಗಾಗಿ ಕಂಡವರ ಮಾತಿನ ಮೇಲೆ ।**
**ಭಂಡಾಟಗಳ ಮಾಡಿದೆ । ಹಸ್ತದಲಿ ಬಿಲ್ ।**
**ಗೊಂಡು ಬಾಣವ ಪೂಡಿದೆ । ಜೋಡಾಗಿರ್ದ ।**
**ಗಂಡುಸುತನ ನೋಡಿದೆ । ರಾಘವ ಬಲು ॥ಜಾಣ॥**
**ಲೇಸಾಯಿತಯ್ಯ ನಿನ್ನಂಗ । ಇನ್ನು ।**
**ಏಸು ಪೇಳುವರೆ ಪ್ರಸಂಗ ॥**
**ಮೋಸದೊಳೆನ ತರಿದೆ ನಿನಗಿದರಿಂದ ।**
**ಲೇಸು ಕೀರ್ತಿಗಳು ಬಂತು । ಕಾಯದೊಳಿದ್ದ ।**

**ಪಾಶದಾಶೆಗಳು ಸಂತು । ಮತ್ಸರವೆಂಬ ।**
**ವಾಸಿಪಂಥಗಳಿನ್ನೆಂತು । ರಾಘವ ಬಲು ॥ಜಾಣ॥**

**ವಾನರರಧಿಪನೆ ಕೇಳೆನ್ನ ಮಾತ ।**
**ನೀನೆನ್ನ ಜರೆವುದೇಕಿಂದ್ರಜಾತ ॥**
**ದಾನವರುಗಳ ದುಷ್ಟರ ತಲೆ ತರಿದು ।**
**ಕ್ಷೋಣೀಭಾರವನಿಳುಹುವದೆಮ್ಮ ಬಿರುದು ॥**
**ನ್ಯಾಯವೆ ತಮ್ಮನ ಸತಿಯ ಮುಟ್ಟುವದು ।**
**ಹೇಯವಾದುದರಿಂದ ದೋಷ ತಟ್ಟಿದುದು ॥**
**ಪ್ರಾಯಶ್ಚಿತ್ತಗಳಿದು ಪರದೋಷಗಳಿಗೆ ।**
**ಕಾಯಖಂಡನವೆಂಬ ನಿಜಮಾತಿನೊಳಗೆ ॥**
**ಮುಂದಿನ್ನು ಬದುಕಬೇಕೆಂಬಾಸೆಯುಮಟೇ ।**
**ಹಿಂದೆ ಕರೆವೆ ಬಾಣವದು ನೋಯದಂತೆ ॥**
**ಒಂದೇ ಬುದ್ಧಿಯೊಳೆಲ್ಲ ಸತ್ಯವ ಬಿಡದೆ ।**
**ಚಂದವಾಗಿರುವುದು ಸರ್ವರೂ ಕಡೆಗೆ ॥**

– ವಾಲ್ಮೀಕಿ ರಾಮಾಯಣದಿಂದ ತೊಡಗಿ ಬಹುತೇಕ ಎಲ್ಲ ಅನ್ಯ ರಾಮಾಯಣಗಳಲ್ಲೂ ಬಹುಚರ್ಚಿತವಾದ ವಾಲಿವಧಾ ಪ್ರಕರಣದ ವಿಮರ್ಶೆ ಇಲ್ಲಿ ವಾಲಿ–ರಾಮರ ಮಧ್ಯೆ ಸಾಗಿದೆ. ಅರ್ಥಧಾರಿಗಳ ಮಧ್ಯೆ ವಾದ–ಸಂವಾದಗಳಿಗೆ ಆಸ್ಪದವಿರುವ ಈ ಭಾಗದ ಮೇಲಿನ ಮೂರು ಪದ್ಯಗಳು ವಾಲಿ ಮಾಡುವ ರಾಮಾಕ್ಷೇಪಗಳು. ಮುಂದಿನ ಮೂರು ಪದ್ಯಗಳು ಆ ಎಲ್ಲಾ ಆಕ್ಷೇಪಗಳಿಗೂ ರಾಮನ ಸಮಾಧಾನದ ಉತ್ತರಗಳಾಗಿವೆ. ತೊರವೆಯ ನರಹರಿ ಕವಿ ರಚಿಸಿದ ಕನ್ನಡ ರಾಮಾಯಣದಿಂದ ತುಂಬಾ ಪ್ರಭಾವಿತನಾದ ಪಾರ್ತಿಸುಬ್ಬ, ಯಕ್ಷಗಾನ ಬಹಳ ವಿಸ್ತಾರವಾದ ಈ ಪ್ರಕರಣವನ್ನು ರಂಗದ ಮರ್ಯಾದೆಯೊಳಗೆ ಸಂಕ್ಷೇಪವಾಗಿ ಚಿತ್ರಿಸಿದ ವಿಧಾನ ಆತನ ಜಾಣ್ಮೆಯನ್ನೂ ಕೌಶಲವನ್ನೂ ತೋರಿಕೊಡುತ್ತದೆ. ಯಕ್ಷಗಾನ ರಂಗದ ಸಾಧ್ಯತೆಗಳನ್ನೂ ಮಿತಿಗಳನ್ನೂ ಅರಿತ ಕವಿಯೊಬ್ಬನಿಂದ ಮಾತ್ರ ಈ ವಿಧದಲ್ಲಿ ಕಾವ್ಯಸತ್ವಾಭಿವ್ಯಕ್ತಿಯನ್ನು ಮಾಡಬಲ್ಲ. ಅದರೊಳಗೂ ತನ್ನ ಸತ್ವವನ್ನು ಹೀಗೆ ಮೆರೆಸಬಲ್ಲ.

**ಪ್ರಸಂಗ – ವಾಲಿ ಸುಗ್ರೀವರ ಕಾಳಗ**
**ಜಯ ಜಯ ರಾಮ ಹರೇ । ಸೀತಾಪತೇ ॥**
**ಜಯ ಜಯ ರಾಮ ಹರೇ ॥ಪ॥**
**ವಿಕಸಿತಾಂಬುಜದಳಲೋಚನ । ಪಾಪನಾಶನ ।**

ಸಕಲಾಭರಣ ವಿಭೂಷಣ । ಜಯ ಜಯರಾಮ ಹರೇ ॥
ದುರ್ಜನಜನಸಂಹಾರಣ । ಸದ್ವಿಚಾರಣ ।
ಸಜ್ಜನಜನಪರಿಪಾಲನ ॥ಜಯ ಜಯ॥
ಕಂಜಬಾಂಧವಕುಲಶೇಖರ । ಮಂಜುಳಾಕರ ।
ಕುಂಜರವರದನೆ ಶ್ರೀಕರ ॥ ಜಯ ಜಯ ॥
ಕರುಣವಿದ್ದರೆ ಸಾಕು । ನಿನ್ನ ಪಾದದ ।
ಕರುಣವಿದ್ದರೆ ಸಾಕು ॥ಪ॥
ಪರಿಪೂರ್ಣವಾಗಿ ಪಾಲಿಸಿಕೊಳ್ಳಬೇಕೆಂಬ ॥ಅ.ಪ.॥
ಮೂರು ದಿನದ ಈ ಸಂ । ಸಾರ ಶಾಶ್ವತವಲ್ಲ ।
ಘೋರದುಃಖಗಳ ಸಂ । ಹಾರ ಮಾಡುವದೊಂದು ॥ಕರುಣ॥
ಭೂತಪಂಚಕ ದೇಹ । ಏತಕಿಷ್ಟರ ಮೋಹ ।
ಚೇತನಾತ್ಮಕ ನಿನ್ನ । ಮೂರ್ತಿಪದಾಂಬುಜದ ॥ಕರುಣ॥
ತಂದೆ ತಾಯಿಗಳೆಂಬು । ದೊಂದು ಸ್ವಪ್ನವಿಚಾರ ।
ಎಂದೂ ನಿನ್ನ ಪದಾರ । ವಿಂದ ಪೂಜಿಸುವಂಥ ॥ಕರುಣ॥
ರಾಮ ನಿನ್ನ ಬಾಣ ತಾಗಿದ । ಮೇಲಿನ್ನುಂಟೆ ।
ಭೂಮಿಯೊಳಾಸೆ ಯೆನಗೆ ॥
ಕಾಮಿತ ಬೇರಿಲ್ಲ ಚಿತ್ತದಿ । ಮುಕ್ತಿಯನಿತ್ತು ।
ಪ್ರೇಮದಿ ರಕ್ಷಿಸೆನ್ನನು ॥
ಇತ್ತ ಬಾ ತಮ್ಮ ಸುಗ್ರೀವ । ಕಿಷ್ಕಿಂಧ ಪಾರು ।
ಪತ್ಯವ ಪಾಲಿಸಯ್ಯ ॥
ಸತ್ಯವಂತೆ ಈ ತಾರೆಯ । ಮಾನವ ಕಾಯ್ದು ।
ಸ್ವಸ್ಥದಿ ಲಾಲಿಸಯ್ಯ ।
ಬಾಲ ಬುದ್ಧಿಯನರಿಯ । ಈ ಅಂಗದನ ।
ಮೇಲೆ ಕಟಾಕ್ಷವಿರಲಯ್ಯ ॥
ಮೇಲಾದ ಕಪಿವೀರರು । ನಮ್ಮ ನಂಬಿಷ್ಟು ।
ಕಾಲವಿದ್ದಂಥವರು ॥
ಕಷ್ಟವ ಮಾಡಿಕೊಳ್ಳದೆ । ಸಜ್ಜನರೊಳು ।
ದುಷ್ಟನೆನಿಸಿಕೊಳ್ಳದೆ ॥
ಅಷ್ಟಸೌಭಾಗ್ಯದಿಂದಲಿ । ಕಿಷ್ಕಿಂಧ ರಾಜ್ಯ ।
ಪಟ್ಟವಾಳಿರು ಸುಖದಿ ॥
ಭರತ ಶತ್ರುಘ್ನರಂದದಿ । ಶ್ರೀರಾಮ ನಮ್ಮ ।
ತರಳ ಸುಗ್ರೀವರಲ್ಲಿ ॥

**ನಿರತ ಕಟಾಕ್ಷವಿರಲಿ । ಈ ವಂಶದವರಲಿ ।**
**ಕರುಣಿಸಿ ಮುಕ್ತಿಂ ದೇಹಿ ॥**
**ಶ್ರೀರಾಮ ರಾಮ ರಾಮ । ರಾಜೀವ ನೇತ್ರ ।**
**ನಾರಾಯಣ ನಾರಾಯಣ ॥**

– ಇವಿಷ್ಟೂ ವಾಲಿಯು ತನ್ನ ಕೊನೆಗಾಲದಲ್ಲಿ ಶ್ರೀರಾಮನಿಗೆ ಶರಣಾಗುವ ಪ್ರಸಂಗ ಸಾಹಿತ್ಯ. ಇವುಗಳ ಆಳ ಹಾಗೂ ವಿಸ್ತಾರ ಗಮನಾರ್ಹ. ಪರದೈವ ತನ್ನೆದುರು ಸಾಕ್ಷಾತ್ಕಾರಗೊಂಡ ವೇಳೆಯಲ್ಲಿ ಅತಿ ಬಲಿಷ್ಠ ವಾಲಿ, ಪ್ರಪನ್ನನಾಗಿ ಸ್ತುತಿಸುವ ವಿಧಾನ ಜಯ ಜಯ ರಾಮ ಹರೇ ಎಂಬಲ್ಲಿ ವ್ಯಕ್ತವಾದರೆ, ಕರುಣವಿದ್ದರೆ ಸಾಕು ಎಂಬ ವಿವರಣೆ ವಾಲಿಯು ತನ್ನ ಸುದೀರ್ಘ ಬದುಕಿನಿಂದ ಸಂಪಾದಿಸಿದ ಸಾಂಸಾರಿಕ ಅನುಭವದ ಪಾಕದಂತಿದೆ ಆ ಅನುಭವಜ್ಞಾನದಿಂದಲೇ ಸಂಸಾರದ ನಶ್ವರತೆಯನ್ನು ಅರಿತು ಹೊಂದಿದ ನಿರ್ವೇದ ಮನಃಸ್ಥಿತಿಯ ನಿವೇದನೆ ಇದು. ಮುಂದಿನ ರಾಮ ನಿನ್ನ ಬಾಣ ತಾಗಿದ ಮೇಲೆ ಎಂಬ ಪದ್ಯ ದೈವದ ನಿಗ್ರಹವೂ ಅನುಗ್ರಹವೇ ಎಂಬ ತತ್ವಜ್ಞಾನದಿಂದ ಒಡಮೂಡಿದ ಪ್ರಪತ್ತಿ.

ಮುಂದೆ ಇತ್ತ ಬಾ ತಮ್ಮ ಸುಗ್ರೀವ ಎಂಬಲ್ಲಿ ತನ್ನ ಅಪರಾಧಕ್ಕಾಗಿ ಪಶ್ಚಾತ್ತಾಪ ವ್ಯಕ್ತವಾದರೆ, ಬಾಲಬುದ್ಧಿಯನರಿಯ ಎನ್ನುತ್ತಾ ಪರಿವಾರ ಹಾಗೂ ಪ್ರಜೆಗಳ ಕುರಿತಾದ ಕಾಳಜಿಯನ್ನು ತೋರುತ್ತಾನೆ. ಕೊನೆಯಲ್ಲಿ ಬಿಡುಗಡೆಯನ್ನು ಯಾಚಿಸುವ ಪ್ರಾರ್ಥನೆಯೇ ಶ್ರೀ ರಾಮ ರಾಮ ಎಂಬ ಭಾಗ. ಮರಣಾಸನ್ನ ಕಾಲದಲ್ಲಿ ಜೀವದ ತುಮುಲವನ್ನು, ವೈವಿಧ್ಯಪೂರ್ಣ ಭಾವಪ್ರವಾಹವನ್ನೂ ತನ್ನ ಕೃತಿಯಲ್ಲಿ ಅಳವಡಿಸಿದ ಪಾರ್ತಿಸುಬ್ಬನ ಪ್ರತಿಭಾದೀಪ್ತಿ ಅಸದೃಶವಾದುದು.

**ಪ್ರಸಂಗ – ಉಂಗುರ ಸಂಧಿ**
**ಇನಕುಲದ ಸೌಭಾಗ್ಯಚಿಂತಾಮಣಿಗೆ ತಕ್ಕ ।**
**ವನಿತೆಯಹುದೆಂದು ಕೊಂಡಾಡಿ ಜನಕಾತ್ಮಜೆಯ ।**
**ಮನದೊಳಗೆ ತಾನೆ ತನ್ನೊಳು ಮಾತನಾಡಿದನು ಜಾನಕಿಯು ಕೇಳುವಂತೆ ॥**

– ಇದು ಸೀತಾನ್ವೇಷಣೆ ಮಾಡುತ್ತಾ ಅಶೋಕವನವನ್ನು ಪ್ರವೇಶಿಸಿ ಸೂಕ್ಷ್ಮರೂಪದಿಂದ ಮರವೇರಿ ಹನುಮಂತ ಕುಳಿತಿದ್ದ ಸನ್ನಿವೇಶ. ಆಗ ರಾವಣ ಬಂದು ಸೀತೆಯ ಮುಂದೆ ಕಾಮಾಭ್ಯರ್ಥನೆ ಮಾಡಿ ಅವಳಿಂದ ತಿರಸ್ಕೃತನಾಗಿ ನಿಂದಿಸಲ್ಪಟ್ಟು ಅವಮಾನಿತನಾಗಿ ಮರಳಿದ ಬಳಿಕ ರಾಮ ವಿರಹದಿಂದ ಬೆಂದು ಶೋಕಿಸುತ್ತಿದ್ದ ಸೀತೆಯನ್ನು ಕಂಡು ಹನುಮನ ಮನದಲ್ಲೂಡಿಸಿದ ಭಾವ ಈ ಪದ್ಯದಲ್ಲಿ ಪಡಿಮೂಡಿದೆ.

ವಾಲ್ಮೀಕಿ ರಾಮಾಯಣದ ಸುಂದರ ಕಾಂಡದಲ್ಲಿ ಇದೆ ಸನ್ನಿವೇಶದಲ್ಲಿ ಸೀತೆಯನ್ನು ಕಂಡ ಹನುಮಂತನಲ್ಲಿ ಉದಿಸಿದ ಭಾವಗಳ ವಿವರಗಳನ್ನೋದಿದವರಿಗೆ, ಅಷ್ಟು ವಿಸ್ತಾರವಾದ ವಿವರಗಳನ್ನು ಇಲ್ಲಿ ಪಾರ್ತಿಸುಬ್ಬ ಇನಕುಲದ ಸೌಭಾಗ್ಯ ಚಿಂತಾಮಣಿಗೆ ತಕ್ಕ ವನಿತೆಯಹುದೆಂದು ಕೊಂಡಾಡಿ ಎಂಬ ಪ್ರಯೋಗದೊಳಗೆ ಹುದುಗಿಸಿದ ಬಗೆ ಬೆರಗು ಹುಟ್ಟಿಸಿತು.

**ಪ್ರಸಂಗ – ಉಂಗುರ ಸಂಧಿ**
**ಕೇಳುತಾಕ್ಷಣ ಕಣ್ಣೊಳಶ್ರುಗಳು ಜಾರಿದವು ।**
**ಹೂಳಿದಂತಸ್ತಾಪ ಶೋಕಜಲಮಯ ಶರಧಿ ।**
**ಗಾಳಿಗೊಡ್ಡಿದ ದೀಪದಿಂದ ತಲ್ಲಣಿಸಿ ರೋಮಾಳಿ ನೆಟ್ಟಗೆ ನಿಂತುದು ॥**
**ಬೀಳುಗೊಂಡುದು ಮನದ ಸಂಶಯವದರ್ಧ ಬಲ**
**ಗಾಲ ತೊಡೆಯಲಿ ಮಚ್ಚೆವುಂಟಂತೆನಲ್ ನಾಲ್ಕು**
**ಪಾಲೊಳೊಂದುಳಿಯೆ ಚಂಚಲ ಕುರುಹುಗಳ ಬಳಿಕ ನೀಲಕುಂತಳೆಗೆಂದನು ॥**

– ಇಲ್ಲಿನ ಕವಿಚಾತುರ್ಯ ಗಮನೀಯ. ಅಶೋಕವನದಲ್ಲಿ ಸೀತೆಯನ್ನು ಕಂಡ ಹನುಮಂತನತ್ತ ಅಪನಂಬಿಕೆಯಿಂದಲೇ ಇದ್ದ ಸೀತೆಯ ಶಂಕೆಯನ್ನು ದೂರೀಕರಿಸಲು ರಾಮವೃತ್ತಾಂತವನ್ನು ವಿವರಿಸುತ್ತಿದ್ದಾಗ ಆತನ ಮಾತುಗಳನ್ನು ಕೇಳಿ ಸೀತೆಯ ಮನದ ಹೊಯ್ದಾಟ ಕಾವ್ಯವೆನಿಸಿದ್ದು ಹೀಗೆ. ಕವಿಪ್ರತಿಭೆಯ ಹಿಡಿತಕ್ಕೆ ಸಿಕ್ಕದ ವಸ್ತು ವಿಷಯಗಳುಂಟೆ! ವಿಷಮ ಘಟ್ಟದಲ್ಲಿ ನಂಬಿಕೆ ಅಪನಂಬಿಕೆಗಳ ಮಧ್ಯೆ ಓಲಾಡುವ ಮನಸ್ಸನ್ನೂ ಕವಿ ಪಾರ್ತಿಸುಬ್ಬನ ದೃಷ್ಟಿ ಕಂಡರಸಿತು, ಅಕ್ಷರವಾಗಿಸಿಬಿಟ್ಟಿತು.

**ಪ್ರಸಂಗ – ಉಂಗುರ ಸಂಧಿ**
**ಶ್ರೀರಾಮಂ ಕರಕಂಜದಂಗುಲಿಯೊಳಾಗಿಟ್ಟಿರ್ದ ಮುದ್ರಾಂಕಮಂ ।**
**ನಾರೀ ಜಾನಕಿ ಕಂಡು ವಿಸ್ಮಿತದೊಳಂ ಕಂಗಳ್ಗದನ್ನೊತ್ತುತ ।**
**ಹೇರಾಳಾ ಸ್ರುತಶೋಕಬಿಂದುಜಲದಿಂ ಸರ್ವಾಂಗಮುಂ ತೋಯಲು**
**ಕಾರುಣ್ಯಾಂಬುಧಿ ರಾಮ ರಾಮ ಯೆನುತಂ ಸದ್ಭಾವದಿಂತೆಂದಳು ॥**

– ಶ್ರೀರಾಮನ ಮುದ್ರೆಯುಂಗುರವನ್ನು ಹನುಮಂತ ಸೀತೆಗೆ ಅರ್ಪಿಸಿದಾಗ ಅತ್ಯಾನಂದ ಪರವಶಳಾದ ಸೀತೆಯ ಸ್ತಿತಿಯ ಪದಗತಿ ಇದು. ಇಲ್ಲಿ ಭಾವ ಪರವಶಳಾದ ಸೀತೆಗೆ ಮಾತು ಹೊರಡದು. ಕವಿ ಪಾರ್ತಿಸುಬ್ಬನಿಗೆ ಆ ಸ್ಥಿತಿಯನ್ನು ವರ್ಣಿಸಿ ತೀರದು. ರಸಿಕರಿಗೆ ಇದರ ಸ್ವಾರಸ್ಯ ಅನುಭವಿಸಿ ಮುಗಿಯದು.

**ಪ್ರಸಂಗ – ಉಂಗುರ ಸಂಧಿ**
**ಕ್ಷೇಮವೇ ಹನುಮ । ನಮ್ಮವರಿಗೆ । ಕ್ಷೇಮವೇ ಹನುಮ ॥ಪ॥**
**ರಾಮ ಲಕ್ಷ್ಮಣರು ರಾಜ್ಯದಲಿ ಸುಸ್ಥಿರವಾಗಿ ॥ಅ.ಪ॥**
**ಮದನನಂಗವ ಪೋಲ್ವ ರಾಮ । ತಮ್ಮ ।**
**ಚದುರ ಲಕ್ಷ್ಮಣನು ನಿಸ್ಸೀಮ ॥**
**ಮೊದಲಿನಂಗದ ಕಾಂತಿ ಕಳವಳಿಸುತ ಮತ್ತೆ ।**
**ಹದಗುಂದಲಿಲ್ಲವಲ್ಲ । ಎನ್ನೊಳು ಮೋಹ ।**
**ವದು ಕುಂದಲಿಲ್ಲವಲ್ಲ । ನೀ ಬರುವ ದಿ ।**
**ನದೊಳಗೆಂತಿರ್ದರೆಲ್ಲ । ನಮ್ಮವರಿಗೆ ॥ಕ್ಷೇಮ॥**

– ಹನುಮಂತ ರಾಮಧೂತನೆಂದು ಖಚಿತವಾದ ಬಳಿಕೆ ಸೀತೆಯ ಕ್ಷೇಮಾನ್ವೇಷಣೆಯ ವಿಧಾನವಿದು. ಪತಿ ವಿರಹದಿಂದ ಸಂತಪ್ತಳಾದ ಕಾವ್ಯನಾಯಕಿ, ತನ್ನೆಲ್ಲಾ ದುಃಖ ದುಮ್ಮಾನಗಳ ಮಧ್ಯೆ ಪತಿಯೆಡೆಗಿನ ಪ್ರೇಮವನ್ನೂ, ಮೋಹವನ್ನೂ ಮೈದುನನಡೆಗಿನ ವಾತ್ಸಲ್ಯವನ್ನು ತನ್ನ ವಿಯೋಗದಿಂದ ಹತಪ್ರಭನಾಗಿರಬಹುದಾದ ರಾಮನ ಕುರಿತಾದ ಕಾಳಜಿಯನ್ನು, ಆತನಿಗೆ ಹತಾಶೆಯಿಂದ ಉದಿಸಬಹುದಾದ ನಿರಾಸಕ್ತಿಯ ಕುರಿತು ಆತಂಕವನ್ನು ಒಗ್ಗೂಡಿಸಿ ಪ್ರಶ್ನೆ ಕೇಳುತ್ತಾ ಇದ್ದಾಳೆ. ಇಲ್ಲಿ ಔಚಿತ್ಯ ಪ್ರಜ್ಞೆಯ ಜೊತೆಯಲ್ಲಿ ಭಾವಸ್ಫುಟತೆಯನ್ನು ಸಾಧಿಸುತ್ತಾ ಕಾವ್ಯ ಕುಣಿಯುತ್ತಿದೆ.

ಇವಿಷ್ಟು ಪಾರ್ತಿಸುಬ್ಬನ ಪದಪ್ರಯೋಗ ವೈಶಿಷ್ಟ್ಯಗಳಿಗೆ ಸೀಮಿತವಾದ ಈ ಲೇಖನದ ವ್ಯಾಪ್ತಿಯೊಳಗೆ, ನನ್ನ ಬೊಗಸೆಯಲ್ಲಿ ತುಂಬಿದ ಪಕ್ವಾನ್ನಗಳು. ಅನುಪಮ ಕವಿತಾಶಕ್ತಿಯನ್ನು ಹೊಂದಿದ ಪಾರ್ತಿಸುಬ್ಬನೆಂಬ ಕೇರಳದವನೆಂಬುದು ಅಲ್ಲಿನವನಾದ ನನಗೂ ಹೆಮ್ಮೆಯ ವಿಚಾರ. ಕೇರಳದಲ್ಲೇ ವಿದ್ಯಾಭ್ಯಾಸವನ್ನು ಮಾಡಿ 'ಕಥಕ್ಕಳಿ'ಯ ಹಾಡುಗಾರನಾಗಿ ಪಳಗಿ 'ಮಲಯಾಳ ರಾಮಾಯಣ', ತೊರೆವೆ ರಾಮಾಯಣ ಇತ್ಯಾದಿ ಆಕರ ಗ್ರಂಥಗಳ ಆಧಾರದಿಂದ ಸಾರ್ವಕಾಲಿಕ ಶ್ರೇಷ್ಠತೆಯನ್ನು ಸಾಧಿಸಿದ ಆತನ ಯಕ್ಷಗಾನ ಸಾಹಿತ್ಯಕೃತಿಗಳು ರೂಪುಗೊಂಡುವು. ಅದಕ್ಕಾಗಿ ಸಾಹಿತ್ಯ ಕ್ಷೇತ್ರ ಹಾಗೂ ಕಲಾಕ್ಷೇತ್ರ ಈ ಶ್ರೇಷ್ಠ ಕವಿ – ಕಲಾವಿದನಿಗೆ ಸದಾ ಋಣಿಯಾಗಿರಬೇಕು. ಕೇರಳದ ದೇವಾಲಯಗಳಲ್ಲಿ ಆರಾಧ್ಯ ದೈವದ ಸ್ತುತಿಗಳನ್ನೂ, ಚರಿತೆಗಳನ್ನೂ ಹಾಡುವವರಿಗೆ ಪಾಟಾಳಿ ಎಂದೂ ಅವುಗಳ ಅರ್ಥವಿವರಣೆಗಳನ್ನು ಮಾಡುವವರಿಗೆ ಪದಾರ್ಥಿ ಎಂದೂ ವೃತ್ತಿಪರವಾಗಿ ಅಂಕಿತವಿದೆ. ಪಾರ್ತಿಸುಬ್ಬ ಕಣಿಪುರ ಶ್ರೀ ಗೋಪಾಲಕೃಷ್ಣ ದೇವರ ಸೇವೆಯನ್ನು ಈ ನೆಲೆಯಲ್ಲಿ ಮಾಡುತ್ತಿದ್ದಾತ. ಈ ವರಕವಿಯ ಕೃತಿಗಳನ್ನು ಹಾಡಿದವರಲ್ಲಿ ಬಲಿಪ ನಾರಾಯನ ಭಾಗವತರಂತೆ ಹಾಡಿದವರಿಲ್ಲ. ಶೇಣಿ ಗೋಪಾಲಕೃಷ್ಣ ಭಟ್ಟರಂತೆ ಅರ್ಥ ವಿವರಣೆಯನ್ನೂ ಮಾಡಿದವರಿಲ್ಲ. ಆದುದರಿಂದ ಬಲಿಪರು ಪಾರ್ತಿಸುಬ್ಬನ ಕೃತಿಗಳ ಶ್ರೇಷ್ಠ ಪಾಟಾಳಿ,

ಶೇಣಿಯವರು ಉತ್ಕೃಷ್ಟ ಪದಾರ್ಥಿ. ಬಲಿಪರು ಹಾಗೂ ಶೇಣಿಯವರು ಪಾರ್ತಿಸುಬ್ಬ ಕವಿಯನ್ನು ಸೇವಿಸಿದ ಬಗೆ, ಧ್ಯಾನಿಸಿದ ಪರಿ, ಆತನ ಕುರಿತಾದ ಭವಿಷ್ಯದ ಅಧ್ಯಯನಗಳಿಗೆ ಪ್ರೇರಣೆಯಾಗಲಿ.

* * *

# ಪಾರ್ತಿಸುಬ್ಬನ ಇತಿಹಾಸ ಮತ್ತು ಐತಿಹ್ಯಗಳು

– ಎಂ.ನಾ.ಚಂಬಲ್ತಿಮಾರ್

ಯಕ್ಷಗಾನ ಇದೀಗ ದೇಶ, ವಿದೇಶಕ್ಕೆ ಪ್ರದರ್ಶನ ವ್ಯಾಪ್ತಿ ವಿಸ್ತರಿಸಿಕೊಂಡಿದೆ. ಲಿಂಗ ತಾರತಮ್ಯವಿಲ್ಲದೇ ಸ್ತ್ರೀ, ಪುರುಷರೆಲ್ಲರೂ ಕಲೆಯಲ್ಲಿ ಸಕ್ರಿಯರು. ಕನ್ನಡನಾಡಿನ ಮುಖಮುದ್ರೆಯಾದ ಈ ಮಣ್ಣಿನಕಲೆಯ ಕುರಿತು ೩ ಶತಮಾನಗಳ ಹಿಂದೆಯೇ ಗಂಭೀರ ಕಾಳಜಿಯಿಂದ, ಭವಿಷ್ಯದ ದೃಷ್ಟಿಯಿಂದ ಋಷಿ ಸದೃಶ ಕಲಾಧ್ಯಯನಗೈದು, ಅದಕ್ಕೆ ಬೇಕಾದ ತಾಳವೃತ್ತಾದಿಗಳನ್ನು ಸಮುಚಿತವಾಗಿ ವಿಶ್ಲೇಷಿಸಿ, ನಿರೂಪಿಸಿ ವೇಷಭೂಷಾಣಾದಿಗಳನ್ನಳವಡಿಸಿ, ರಂಗಕಲ್ಪನೆಯ ಸೌಂದರ್ಯವನ್ನಿತ್ತು ರಸಸ್ಪಂದಿಯಾದ ಸಾಹಿತ್ಯದ ಸಮಪಾಕವಾಗಿ ಯಕ್ಷಗಾನವನ್ನು ಉಣಬಡಿಸಿದ ಆಚಾರ್ಯಪುರುಷ ಕುಂಬಳೆ ಯಾನೆ ಕಣಿಪುರದ ಪಾರ್ತಿಸುಬ್ಬ. ಪೂರ್ವದಲ್ಲಿ ಕೇವಲ ಪಾಮರರಂಜಕ ಕಲೆಯಾಗಿದ್ದು, ಶ್ರಮಿಕ ಜನಾಂಗದ ಆಡುಂಬೊಲವಾಗಿದ್ದ ಜನಪದೀಯ ಯಕ್ಷಗಾನಕ್ಕೆ ಬಯಲಾಟದ ಶಾಸ್ತ್ರೀಯ ಆಕರಗ್ರಂಥವಾಗಿ 'ಸಭಾಲಕ್ಷಣ' ರೂಪಿಸಿತ್ತವನು ಈ ಮಹಾಮನುಷ್ಯ. ಸಭಾಲಕ್ಷಣದಲ್ಲಿ ಚೌಕಿಪೂಜೆಯಿಂದ ಮೊದಲ್ಗೊಂಡು ಭಾಗವತರ ಲಕ್ಷಣ, ರಂಗಸ್ಥಳದ ವಿವರ, ಕೋಡಂಗಿವೇಷ, ಭಾಗವತ–ಕೋಡಂಗಿ ಸಂಭಾಷಣೆ, ಷಣ್ಮುಖಸುಬ್ರಾಯ, ಸ್ತ್ರೀವೇಷ, ಹಾಸ್ಯಗಾರ ಇತ್ಯಾದಿ ನಮೂನೆವಾರು ಪಾತ್ರಗಳ ಪೂರ್ವರಂಗವನ್ನೊದಗಿಸಿ ಕಲೆಗೆ ಚಾರಿತ್ರಿಕ ಕೊಡುಗೆಯಿತ್ತ ಶಾಸ್ತ್ರೀಯ ಸಾಧನೆ ಆತನದ್ದು. ಪುತ್ರಕಾಮೇಷ್ಟಿ, ಶ್ರೀರಾಮ ಪಟ್ಟಾಭಿಷೇಕ, ಪಂಚವಟಿ, ವಾಲಿಸುಗ್ರೀವರ ಕಾಳಗ, ಉಂಗುರಸಂಧಿ, ಸೇತುಬಂಧನ, ಅಂಗದಸಂಧಾನ, ಕುಂಭಕರ್ಣಕಾಳಗ ಮುಂತಾದ ಸಂಪೂರ್ಣ ರಾಮಾಯಣದ ಪ್ರಸಂಗಗಳನ್ನೂ ಭಾಗವತ ಪ್ರಸಂಗಗಳನ್ನೂ ರಚಿಸಿ ಯಕ್ಷಗಾನದ ಆದಿಕವಿ ವಾಲ್ಮೀಕಿಯೆಂದೇ ಕೊಂಡಾಡಲ್ಪಟ್ಟ ಇವರು ಯಕ್ಷಗಾನ ಕವಿಕಾವ್ಯಚರಿತ್ರೆ ಮತ್ತು ರಂಗತಂತ್ರಜ್ಞತೆಯ ಪಿತಾಮಹ. ರಂಗಪ್ರದರ್ಶನವೊಂದು ಏಕಕಾಲದಲ್ಲಿ ಜನಸಾಮಾನ್ಯರನ್ನೂ, ವಿದ್ವಜ್ಜನರನ್ನೂ ತಲೆದೂಗಿಸಬೇಕೆಂಬ ಕಲ್ಪನೆಯಿಂದ ಹೆಣೆದ ಪಾರ್ತಿಸುಬ್ಬನ ಪ್ರಸಂಗಗಳು ಯಕ್ಷಗಾನ ಚರಿತ್ರೆಯಲ್ಲಿ ಮೇರುಸ್ಥಾನದಲ್ಲಿವೆ. ಇಂದೀಗ ೫ ಸಾವಿರದಷ್ಟು ಪ್ರಸಂಗಗಳು ಯಕ್ಷಗಾನದಲ್ಲಿ ಲಭ್ಯವಾದರೂ, ಅದಕ್ಕೆಲ್ಲ ಮುನ್ನುಡಿಯಾಗಿ

ಮಾದರಿಯ ಪಥದರ್ಶನದ ಪ್ರೇರಣೆ ಪಾರ್ತಿಸುಬ್ಬನ ಕೃತಿಗಳಿಂದಲೇ ಎಂಬುದು ಸರ್ವರೂ ಒಪ್ಪಿದ ವಿಚಾರ.

**ಪಾರ್ತಿಸುಬ್ಬ ಯಾರು...?**

ಇತಿಹಾಸ ಎಂದರೆ ಕಳೆದ ಕಾಲದ ಚರಿತ್ರೆ. ಐತಿಹ್ಯ ಎಂದರೆ ಕಳೆದ ಕಾಲ ಸಾಗಿ ಬಂದ ಹಾದಿಯಲ್ಲಿ ಸಿಗುವ ಕರ್ಣಾಕರ್ಣಿಕೆಯ ದಂತಕತೆ. ಭಾರತೀಯ ಸಾಂಸ್ಕೃತಿಕ ನಕಾಶೆಯಲ್ಲಿ ನಿನ್ನೆಗಳ ಚರಿತ್ರೆಯನ್ನು ಪ್ರಾಚೀನ ಕಾಲದಿಂದಲೇ ಕರಾರುವಾಕ್ಕಾಗಿ ನಮೂದಿಸಿ ಉಲ್ಲೇಖಿಸಿ ಕೈದಾಟಿಸಿದ ಚರಿತ್ರೆಯ ದಾಖಲಾತಿ ವಿರಳ. ಸುಬ್ಬನು ತನ್ನ ಕೃತಿಗಳಲ್ಲಿ ತನ್ನನ್ನು ತಾನೇ ಪಾರ್ವತಿನಂದನ ಎಂದು ಕರೆದುಕೊಂಡಿದ್ದಾನೆ. ಕಣಿಪುರದ ಶ್ರೀ ಗೋಪಾಲಕೃಷ್ಣದೇವರು ಆರಾಧ್ಯದೇವರಾಗಿಯೂ ನಮೂದಿಸಿದ್ದಾನೆ. ಸುಬ್ಬ ಅಥವಾ ಸುಬ್ರಾಯ ಎಂದಿದ್ದ ಹೆಸರು ಪಾರ್ವತಿಯ ಮಗ ಸುಬ್ಬ ಎಂದು ಉಲ್ಲೇಖಿಸುವ ಕ್ರಮದಲ್ಲಿ ಪಾರ್ತಿಸುಬ್ಬ ಎಂದಾಯಿತೆಂದು ಸಂಶೋಧಕರು ಉಲ್ಲೇಖಿಸಿದ್ದಾರೆ.

ಪಾರ್ತಿಸುಬ್ಬ ಕುಂಬಳೆಯ ಪಾಟಾಳಿಗಳ ವಂಶಸ್ಥನೆಂದು ಹೇಳಲಾಗುತ್ತಿದೆ. ಕುಂಬಳೆಯ ಬಯಲಾಟ ಮೇಳದಲ್ಲಿ ಭಾಗವತರಾಗಿ ಇದ್ದವನು. ಕುಂಬಳೆ (ಕಣಿಪುರ) ಅರಸರ ಕೃಪೆಯಿಂದ ತಿರುವಾಂಕೂರು (ತಿರುವನಂತಪುರ) ರಾಜ್ಯದಲ್ಲಿ ಸಂಚಾರಗೈದು ವಿದ್ಯಾಭ್ಯಾಸದ ಜತೆಯಲ್ಲೇ ಅಲ್ಲಿನ ಕೂತ್ತು ಕಲೆಗಳ ಅಧ್ಯಯನ ಮಾಡಿದವನು. ಕಥಕ್ಕಳಿಯಲ್ಲಿ ಭಾಗವತಿಕೆ (ಕಥಕ್ಕಳಿ ಪದಂ ಹಾಡುಗಾರ) ಮಾಡಿದ್ದರೆಂದೂ ಹೇಳಿಕೆಯಿದೆ. ರಾಮಾಯಣ ಪ್ರಸಂಗಗಳನ್ನಲ್ಲದೇ, ಕೃಷ್ಣಚರಿತ, 'ಐರಾವತ'ವನ್ನೂ ರಚಿಸಿ ಕಣಿಪುರದಲ್ಲಿ(ಕುಂಬ್ಳೆ) ದಶಾವತಾರ ಮೇಳ ಆರಂಭಿಸಿದನೆಂದೂ, ಮೇಳವನ್ನು ತೆಂಕು-ಬಡಗೆಂಬ ಸೀಮಾವ್ಯಾಪ್ತಿ ದಾಟಿ ಕುಂದಾಪುರದ ತನಕ ವಿಸ್ತರಿಸಿದನೆಂದೂ ಸಂಶೋಧಕರು ಉಲ್ಲೇಖಿಸಿದ್ದಾರೆ. ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳ ಮದ್ರಾಸು ಆಕಾಶವಾಣಿಯ ಭಾಷಣ, ೧೯೪೯ರ ನವಭಾರತ ದೈನಿಕದ ಲೇಖನ, ಮುಳಿಯ ತಿಮ್ಮಪ್ಪಯ್ಯನವರ "ಪಾರ್ತಿಸುಬ್ಬ ಗ್ರಂಥ", ದಿ.ಬಡಕ್ಕಬೈಲು ಪರಮೇಶ್ವರಯ್ಯ, ದಿ.ಕವಿಭೂಷಣ ವೆಂಕಪ್ಪಶೆಟ್ಟಿ, ಕರ್ನಾಟಕ ಕವಿಚರಿತ್ರೆ, ನಾಡೋಜ ದಿ.ಕವಿ ಕಯ್ಯಾರ ಮುಂತಾದವರೆಲ್ಲರೂ ಹಿಂದೆ ತಮ್ಮ ಲೇಖನಗಳಲ್ಲಿ ಪಾರ್ತಿಸುಬ್ಬನ ಈ ಹಿನ್ನೆಲೆಯನ್ನು ಶತಮಾನದ ಹಿಂದೆಯೇ ದಾಖಲಿಸಿ ಅದನ್ನು ತರ್ಕರಹಿತ ವಿಚಾರವನ್ನಾಗಿಸಿದ್ದಾರೆ.

ತೆಂಕಣ ಯಕ್ಷಗಾನಕ್ಕೆ ನವಭಾಷ್ಯದ ನವೀನ ಆಯಾಮವನ್ನಿತ್ತು, ಕಲೆಯನ್ನು ಜಗದೆತ್ತರಕ್ಕೆ ಆರೋಹಿಸಿದ ಪಾರ್ತಿಸುಬ್ಬನೊಳಗೆ ಕೇವಲ ಕವಿಯಷ್ಟೇ ಅಲ್ಲ ಸಮರ್ಥ ರಂಗದೃಷ್ಟಿಯ ನಿರ್ದೇಶಕನೂ ಇದ್ದ. ಕಣಿಪುರ ಗೋಪಾಲಕೃಷ್ಣ ಕ್ಷೇತ್ರದ ಒತ್ತಿನಲ್ಲಿದ್ದ ಪಾಟಾಳಿಗಳ ಹಿತ್ಲು ನಿವಾಸಿಯಾಗಿದ್ದ ಪಾರ್ವತಿಯ ಮಗ ಸುಬ್ಬ ಕುಂಬಳೆಯಿಂದ ಈ ಪರಿ

ಉತ್ಕರ್ಷಿಸಿದ್ದು, ಅಚ್ಚರಿಯ ಮತ್ತು ಚಾರಿತ್ರಿಕ ವಿದ್ಯಮಾನ. ಪಾರ್ತಿಸುಬ್ಬನಿಗೆ ಕಾಲೋತ್ತರದಲ್ಲಿ ಮಾನ್ಯತೆ ತಂದಿತ್ತದ್ದೇ ಯಕ್ಷಗಾನದ ಪೂರ್ವರಂಗದ ಸಭಾಲಕ್ಷಣವೆಂಬ ರಂಗಶೋಧಿತ ಪ್ರಕಾರ. ಪಾರ್ತಿಸುಬ್ಬ ಕುಂಬಳೆಯ ದಶಾವತಾರ ಬಯಲಾಟ ಮೇಳದಲ್ಲಿ ಪ್ರಪ್ರಥಮ ಅನುಷ್ಠಾನಕ್ಕೆ ತಂದ ಈ ರಂಗವಿಧಾನ ಆ ಬಳಿಕ ಕನ್ನಡ ಕರಾವಳಿಯ ಇತರೆಲ್ಲ ದಶಾವತಾರ ಮೇಳಗಳಲ್ಲೂ, ತಿಟ್ಟುಬೇಧವಿಲ್ಲದೇ ಕರಾವಳಿ ಯುದ್ದಕ್ಕೂ ಅನುಷ್ಠಾನಕ್ಕೆ ಬಂತು. ಈ ಸಭಾಲಕ್ಷಣದಲ್ಲಿ ಮೊದಲು ಸ್ತುತಿಸಲ್ಪಡುವವನು ಮದವೂರ ವಿಘ್ನೇಶನಿಗೇ ಸಮರ್ಪಿತ. ಆದ್ದರಿಂದ ಈ ಸಭಾಲಕ್ಷಣ ಯಕ್ಷಗಾನ ರಂಗಕ್ಕೆ ಬಂದ ಮೊದಲ ಪೂರ್ವರಂಗಕೃತಿ ಎಂಬುದರಲ್ಲಿ ಸಂದೇಹವಿಲ್ಲ.

ಈ ಸಭಾಲಕ್ಷಣದಲ್ಲಿ ರಾಮಸ್ತುತಿಯೂ ಇದೆ, ರಾಮನ ಒಡ್ಡೋಲಗವು ಸಾಂಪ್ರದಾಯಿಕ ನಡೆಯುವ ಕ್ರಮವಿದೆ. ಪ್ರದರ್ಶನಗೊಳ್ಳುವ ಪ್ರಸಂಗ ರಾಮಾಯಣದಲ್ಲದಿದ್ದರೂ ಪೂರ್ವರಂಗ ಸಭಾಲಕ್ಷಣದಲ್ಲಿ ರಾಮನವೇಷದ ಒಡ್ಡೋಲಗ ನಡೆಲೇಬೇಕು. ಆಗ ಹಾಡುವ ಪದ್ಯವೂ ಪಾರ್ತಿಸುಬ್ಬನ "ಪುತ್ರಕಾಮೇಷ್ಟಿ" ಪ್ರಸಂಗದಲ್ಲಿ ದಶರಥನ ಒಡ್ಡೋಲಗಕ್ಕಿರುವ ಪದ್ಯವೇ ಆಗಿದೆ. ಅಲ್ಲದೇ ರಾಮನ ವೇಷ ಕುಣಿಸುವ ಒಂದೆರಡು ಪದ್ಯ 'ಪಂಚವಟಿ' ಪ್ರಸಂಗದಿಂದಲೂ ಆಯ್ದು ಸಾಂಪ್ರದಾಯಿಕವಾಗಿ ಹಾಡಲ್ಪಡುತ್ತದೆ. ಆದ್ದರಿಂದ ರಾಮಾಯಣ ಪ್ರಸಂಗಗಳು ಸಭಾಲಕ್ಷಣದ ಜೊತೆಗೆ ರಂಗಕ್ಕೆ ಬಂತೆನ್ನಬಹುದು. ಅಲ್ಲದೇ ತಾನು ಪ್ರಭಾವಿತನಾದ ಕಥಕ್ಕಳಿಯಿಂದ ಪ್ರೇರಣೆಗೊಂಡು ಕಥಕ್ಕಳಿಯ ಮೂಲಪ್ರವರ್ತಕರಾದ ಕೊಟ್ಟಾರಕ್ಕರ ರಾಜರಾಗಿದ್ದ ಬಾಲಕೇರಳವರ್ಮ ವಿರಚಿತ ಕಥಕಳಿ ರಾಮಾಯಣದ ಪಡಿಯಚ್ಚಿನ ನೆರಳಿದೆ. ಎಷ್ಟೋ ಪದ್ಯಗಳು ಯಕ್ಷಗಾನದಲ್ಲಿ ಯಥಾರೂಪದ ಅನುವಾದ ಕಂಡಿವೆ. ಕನ್ನಡಕ್ಕೆ ಅಪೂರ್ವವಾದ ವೃತ್ತ ಬಂಧಗಳೂ ಈ ಮೂಲಕ ಬಂದಿವೆ. ಇದನ್ನು ಕುಕ್ಕಿಲ ಕೃಷ್ಣ ಭಟ್ಟರು ಸಂಶೋಧಿಸಿದ ಪಾರ್ತಿಸುಬ್ಬನ ಯಕ್ಷಗಾನಗಳು ಕೃತಿಯಲ್ಲಿ ಪರಿಶೀಲಿಸಬಹುದು.

ಕಣಿಪುರದ ಗೋಪಾಲಕೃಷ್ಣನಷ್ಟೇ ಮದವೂರಿನ(ಮಧೂರು) ವಿಘ್ನೇಶನೂ ಪಾರ್ತಿಸುಬ್ಬನ ಇಷ್ಟದೇವರು. ತನ್ನ ಕೃತಿಗಳಲ್ಲೆಲ್ಲಾ ಈ ಬಗೆಯ ಉಲ್ಲೇಖಿತ ಸ್ತುತಿಗಳಿವೆ. ಪಾರ್ತಿಸುಬ್ಬನ ರಾಮಾಯಣ ಪ್ರಸಂಗ ಮೊದಲಿಗೆ ಮಧೂರಿನ ವಿಘ್ನೇಶ್ವರನಿಗೆ ಸಂದಾಯ ಎಂಬಂತೆ ಪ್ರದರ್ಶನಗೊಂಡಿತೆಂದು ಉಲ್ಲೇಖವಿದೆ. ಇದಕ್ಕೆ ಪೂರಕವಾಗಿ ಮಧೂರಿನ ಮುಖಮಂಟಪದಲ್ಲಿ ಪುತ್ರಕಾಮೇಷ್ಟಿ ಪ್ರಸಂಗದ ಪ್ರತಿಯೊಂದು ಕಥಾಸಂದರ್ಭಗಳನ್ನು ಯಕ್ಷಗಾನ ವೇಷಗಳಲ್ಲೇ ಕೆತ್ತಿದ ಪುರಾತನ ಮರದ ಕೆತ್ತನೆಗಳನ್ನು ನೋಡಬಹುದು. ಅಲ್ಲದೇ ಮದೂರಿನ ಮೂಡಪ್ಪ ಸೇವೆಗೆ ತಾನು ಕಾಣಿಕೆಯಾಗಿತ್ತು, ತನ್ನ ಹೆಸರು ನಮೂದಿಸಿರುವ ಜಲದ್ರೋಣಿಯೊಂದು ಮಧೂರಿನಲ್ಲಿ ಈಗಲೂ ಇದೆ.

ಪಾರ್ತಿಸುಬ್ಬ ಯಾರೆಂಬುದೇ ಒಂದು ಕುತೂಹಲ. ಆತನ ಬಳಿಕ ವಂಶವೃಕ್ಷಕ್ಕಿಂತಲೂ ಆತನ ಪೂರ್ವಿಕರ ಹಿನ್ನೆಲೆ ಲಭ್ಯವಿಲ್ಲ. ಲಭ್ಯ ಐತಿಹ್ಯದಂತೆ–ಕಣಿಪುರ ಶ್ರೀಗೋಪಾಲಕೃಷ್ಣ ದೇವಾಲಯದಲ್ಲಿ ಸೇವೆಗೆ ನಿಯುಕ್ತಳಾಗಿದ್ದ ಪಾರ್ವತಿ ಎಂಬ ಅವಿವಾಹಿತ ಹೆಂಗಸಿನ ಮಗನೇ ಸುಬ್ಬ. ಕೇರಳದ ಯಾವುದೋ ಕ್ಷೇತ್ರದಲ್ಲಿ ಅರ್ಚಕರಾಗಿದ್ದ ಬ್ರಾಹ್ಮಣರೊಬ್ಬರ ಸಂಬಂಧದಿಂದ ಪಾರ್ವತಿಗೆ ಪುತ್ರ ಸಂತಾನವಾಯಿತು. ಅರ್ಚಕ ವೃತ್ತಿಯಲ್ಲಿದ್ದ ಈ ಬ್ರಾಹ್ಮಣನ ಮೂಲಕವೇ ಸುಬ್ಬನಿಗೆ ಬಳಿಕ ಕೇರಳ ಸಂಪರ್ಕ ಆಯಿತು. ಅವರಿಂದಲೇ ತಿರುವಾಂಕೂರಿನಲ್ಲಿ ವಿದ್ಯಾಭ್ಯಾಸ ವ್ಯವಸ್ಥೆಯೂ ನಡೆಯಿತು. ಈ ಐತಿಹ್ಯವು ೧೯೪೮ನೇ ಇಸವಿಯಲ್ಲಿ ಮಂಗಳೂರಿನಲ್ಲಿ ಪ್ರಕಟಗೊಳ್ಳುತ್ತಿದ್ದ "ಕಲಾ" ಎಂಬ ಮಾಸಪತ್ರಿಕೆ (ಸಂ.೧., ಸಂಚಿಕೆ ೨)ಯಲ್ಲಿ ಪ್ರಕಟವಾಗಿತ್ತೆಂದು "ಪಾರ್ತಿಸುಬ್ಬನ ಯಕ್ಷಗಾನಗಳು" ಗ್ರಂಥ ಉಲ್ಲೇಖಿಸಿದೆ.

ಅವಿವಾಹಿತ ಮಹಿಳೆಯರು ಉತ್ತಮಕುಲದ ಬ್ರಾಹ್ಮಣ ಸಂಪರ್ಕದಿಂದ ಸಂತಾನ ಪಡೆಯುವುದು ಕೇರಳದ ಪ್ರಾಚೀನ ಸಂಸ್ಕೃತಿಯ ಭಾಗವಾಗಿತ್ತು. ಆದರೆ ಆ ಕಾಲಕ್ಕೆ ಕಾಸರಗೋಡು ಭೂಭಾಗ ಕೇರಳದ ವಶವಿರಲಿಲ್ಲ ಮತ್ತು ಮೈಸೂರು ಪ್ರಾಂತ್ಯದ ದಕ್ಷಿಣ ಕನ್ನಡದ ಭಾಗವಾಗಿತ್ತು. ತನ್ನನ್ನು ತಾನು ಪಾರ್ವತಿನಂದನ ಎಂದಷ್ಟೇ ಹೇಳಿಕೊಂಡ ಸುಬ್ಬನು ಎಲ್ಲೂ ತನ್ನ ಪಿತನ ಬಗ್ಗೆ ಉಲ್ಲೇಖಿಸದೇ ಇರುವುದೊಂದು ವಿಶೇಷ. ಎಳವೆಯಲ್ಲೇ ಕೇರಳಕ್ಕೆ ತೆರಳಿ ಕೂತ್ತ್ ಕಲೆಗಳ ಅನುಭವ ಹೊಂದಿ ಬಳಿಕೆ ತನ್ನದೇ ಪರಿಕಲ್ಪನೆಯಲ್ಲಿ ನಮ್ಮ ಮಣ್ಣಿನ ಘನತೆಯನ್ನು ಉನ್ನತೀಕರಿಸಿದ. ಯಕ್ಷಗಾನವನ್ನು ಶಾಸ್ತ್ರೀಯ ದೃಷ್ಟಿಯಲ್ಲಿ ಪರಿಷ್ಕರಿಸಿ, ಹೊಸ ದಿಕ್ಕು–ದಿಶೆಯ ಆಯಾಮವನ್ನಿತ್ತ ಪಾರ್ತಿಸುಬ್ಬ ಕೇರಳದಿಂದ ಬಂದ ಬಳಿಕ ಕುಂಬಳೆ ದಶಾವತಾರ ಮೇಳವನ್ನೆತ್ತಿ ಮೇಳದ ಜೊತೆಯಲ್ಲೇ ದೇಶಾಂತರ ತಿರುಗಾಟದಲ್ಲಿದ್ದ. ಎಲ್ಲಿಯೂ ನಿಲ್ಲದೇ ದೇಶಾಂತರ ಸಂಚಾರಗೈಯ್ಯುತ್ತಿದ್ದ ಸುಬ್ಬನು ತನ್ನ ತಾಯಿಯನ್ನು ಮಾತ್ರ ಬಿಟ್ಟಿರಲಿಲ್ಲವೆಂದೂ ಹೇಳಿಕೆಯಿದೆ. ಪಾರ್ತಿಸುಬ್ಬನನ್ನು ಆತನ ಕೃತಿಗಳ ಮೂಲಕ ಹುಡುಕಿದರೆ ರಾಗ–ತಾಳ ದೃಷ್ಟಿಯಿಂದ ಈತ ೧೮ ಶತಮಾನಕ್ಕೂ ಹಿಂದಿನವನೆಂದು ಊಹಿಸಬಹುದು. ಹಾಗೆಯೇ ಕಥಕ್ಕಳಿ ರಾಮಾಯಣದ ಅನಂತರದವನೆಂದೂ ನಂಬುವುದರಲ್ಲಿ ಅನುಮಾನವಿಲ್ಲ. ಏಕೆಂದರೆ ಪಾರ್ತಿಸುಬ್ಬನ ಸ್ಪಷ್ಟ ಕಾಲನಿರ್ಣಯಕ್ಕೆ ಅಧಿಕೃತ ಆಧಾರವಿಲ್ಲ. ಆತನ ಕೃತಿಗಳೇ ಆತನ ಅಸ್ತಿತ್ವದ ಆಧಾರ. ಜೀವನವನ್ನು ಅಲೆಮಾರಿ ಸಂತನಂತೆ ಕಲಾರಾಧನೆಗೆ ಮೀಸಲಿಟ್ಟು, ಕೌಟುಂಬಿಕ ಬಾಂಧವ್ಯಕ್ಕೆ ಕಟ್ಟುಬೀಳದೇ, ಕಡುಬಡತನದ ನೈಜ ಬೇಗೆಯನ್ನುಂಡ ಪಾರ್ತಿಸುಬ್ಬನ ಪ್ರಸಂಗ ಕೃತಿಯ ಹಲವು ಪಾತ್ರಗಳಲ್ಲಿ ತನ್ನ ಬದುಕಿನ ಬಡತನವೇ ಪದ್ಯವಾದ ದೃಷ್ಟಾಂತಗಳಿವೆ. ತನ್ನ ಸುತ್ತಲಿನ ಕಣ್ನೋಟಗಳೇ ಚಿತ್ರಿತವಾದ ನಿದರ್ಶನಗಳಿವೆ. ಪಾರ್ತಿಸುಬ್ಬ ಯಾವಾಗ ಹುಟ್ಟಿದ, ಯಾವಾಗ ಅಸುನೀಗಿದ ಎಂಬ ನಿಖರ ಮಾಹಿತಿ ಇಲ್ಲ. ಆದರೆ ಕರ್ಣಾಕರ್ಣಿಕೆಯ ಕತೆಗಳು ಕುಂಬಳೆ ಸೀಮೆಯಲ್ಲಿ ಸುಮಾರು ೭೫ ವರ್ಷಗಳ

ಹಿಂದಿನವರೆಗೆ ಚಾಲ್ತಿಯಲ್ಲಿತ್ತು. ಇಂದಿಗೂ ಪರಭಾರೆಗೊಂಡ ಪಾರ್ತಿಸುಬ್ಬನ ಹಿತ್ಲು, ತಾನು ಶಿವಾರಾಧನೆಗೈದು ಕೃತಿ ರಚನಾ ಕಾಯಕ್ಕೆ ಕುಳಿತಿರುತ್ತಿದ್ದ ಶೇಡಿಕಾಪು ಕ್ಷೇತ್ರ ಪರಿಸರ ಗತ ಚರಿತ್ರೆಗೆ ಕನ್ನಡಿಯಾಗಿದೆ. ಇದು ಸಮುದ್ರದಂಡೆಯ ಅಳಿವೆ ಬಾಗಿಲಿನಲ್ಲಿರುವ ಎತ್ತರದ ಪ್ರದೇಶ. ಈ ಪರಿಸರ ಆತನ ಬದುಕಿನ ಕಾವ್ಯಸೃಜನೆಗೆ ಪ್ರಚೋದನಕಾರಿಯಾಗಿ–ದ್ದಿರಬಹುದು.

(ಕರ್ನಾಟಕ ಯಕ್ಷಗಾನ ಅಕಾಡೆಮಿ ೨೦೨೦ ಫೆಬ್ರವರಿ ೧೩, ೧೪ರಂದು ಕಾಸರಗೋಡಿನಲ್ಲಿ ಹಮ್ಮಿಕೊಂಡಿದ್ದ "ಪಾರ್ತಿಸುಬ್ಬ ಬದುಕು–ಬರಹ" ದ್ವಿದಿನ ವಿಚಾರ ಸಂಕಿರಣದಲ್ಲಿ ಪಾರ್ತಿಸುಬ್ಬನ ಇತಿಹಾಸ ಮತ್ತು ಐತಿಹ್ಯ ವಿಷಯದಲ್ಲಿ ಮಂಡಿಸಿದ ಉಪನ್ಯಾಸದ ಸಂಕ್ಷಿಪ್ತ ರೂಪ.)

* * *

# ಅಧ್ಯಕ್ಷರ ಭಾಷಣ

**– ಡಾ. ಯು. ಶಂಕರನಾರಾಯಣ ಭಟ್**

ಒಬ್ಬ ಪ್ರಾಚೀನ ಯಕ್ಷಗಾನ ಪ್ರಸಂಗ ಕರ್ತೃವಿನ ಊರಿನಲ್ಲಿಯೇ ಆತನ ಪ್ರಸಂಗಗಳ ಮತ್ತು ಜೀವನದ ಕುರಿತು ವಿಚಾರ ಸಂಕಿರಣವು ನಡೆಯುತ್ತಿರುವುದು ಸಂತೋಷದ ವಿಷಯ. ಅದು ನಾವು ಆ ಕವಿಗೆ ಸಲ್ಲಿಸುತ್ತಿರುವ ಗೌರವ; ಮಾತ್ರವಲ್ಲದೆ ಆತನ ಸಮಗ್ರ ವಿಚಾರಗಳ ಕುರಿತು ಮುಂದಿನ ಪೀಳಿಗೆಗೆ ದಾಟಿಸಬೇಕಾದುದು ನಮ್ಮ ಕರ್ತವ್ಯವೂ ಹೌದು. ಅಂತಹ ಒಂದು ಉತ್ತಮ ಕಾರ್ಯವನ್ನು ಹಮ್ಮಿಕೊಂಡು ಕರ್ನಾಟಕ ಯಕ್ಷಗಾನ ಅಕಾಡೆಮಿಗೆ ಮೊತ್ತಮೊದಲಿಗೆ ಅಭಿನಂದನೆಗಳು.

ಇಂದು ಪೂರ್ವಾಹ್ನ ನಡೆದ ಉದ್ಘಾಟನೆಯ ಸಂದರ್ಭದಲ್ಲಿ ಪಾರ್ತಿಸುಬ್ಬನ ಬಗ್ಗೆ ನೀವೆಲ್ಲರೂ ಕೇಳಿದ್ದೀರಿ. ಅಪರಾಹ್ನದ ಈ ವೇದಿಕೆಯಲ್ಲಿ ಮಂಡಿಸಿರುವ ವಾಸುದೇವ ರಂಗಾಭಟ್ಟರ ಮತ್ತು ಎಂ.ನಾ.ಚಂಬಲ್ತಿಮಾರಿನವರ ಪ್ರಬಂಧ ವಿಚಾರಗಳನ್ನು ನೀವು ಆಲಿಸಿದ್ದೀರಿ. ಅವರು ಮಂಡಿಸಿದ ವಿಚಾರಗಳ ಬಗ್ಗೆ ನಾನು ಏನನ್ನೂ ಎನ್ನೆ. ನೀವೇ ಅದರ ನಿರ್ಣಾಯಕರು.

ಪಾರ್ತಿಸುಬ್ಬನ ಕುರಿತು ಒಂದೆರಡು ವಿಚಾರಗಳನ್ನು ನಿಮ್ಮ ಮುಂದಿಡಲು ಬಯಸುತ್ತೇನೆ. ಸುಬ್ಬನ (ಕಾಲ ಸು. ೧೫೯೦–೧೬೨೦) ದೇಶ, ಕಾಲ, ಪ್ರಸಂಗಗಳ ಕುರಿತು ವಿದ್ವಾಂಸರಾದ ಶ್ರೀಯುತ ಕುಕ್ಕಿಲ ಕೃಷ್ಣಭಟ್ಟರು ಈಗಾಗಲೇ ಸವಿವರವಾಗಿ ತಿಳಿಸಿರುತ್ತಾರೆ.[೧] ಅವರ ವಿಚಾರಗಳು ಒಪ್ಪತಕ್ಕವೇ ಆದರೂ ಇನ್ನೂ ಚಿಂತನೆಗೆ ಅವಕಾಶವಿಲ್ಲದಿಲ್ಲ.

---

೧. ಪಾರ್ತಿಸುಬ್ಬನ ಯಕ್ಷಗಾನಗು. ಸಂ: ಕುಕ್ಕಿಲ ಕೃಷ್ಣಭಟ್ಟ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ–೧೯೭೫.

ದೇಶಮಂಗಲ ಕೃಷ್ಣಕಾರಂತರು (೧೮.೧೦.೧೯೧೫, ೮.೧೨.೨೦೦೫) ಇಪ್ಪತ್ತನೆಯ ಶತಮಾನದ ಪ್ರಸಿದ್ಧ ವೈಚಾರಿಕ ಅರ್ಥಧಾರಿಗಳಾಗಿದ್ದರು. ನಾನು ಕ್ಷೇತ್ರಕಾರ್ಯ ಮಾಡುತ್ತಿದ್ದ ಸಂದರ್ಭದಲ್ಲಿ ಅವರನ್ನು ಸಂಪರ್ಕಿಸಿದಾಗ ನನ್ನಲ್ಲಿ ಹೇಳಿದ ಕೆಲವು ವಿಚಾರಗಳಿವೆ. ಅವರಿಗೆ ಹತ್ತೋ ಹನ್ನೆರಡು ವರ್ಷ ವಯಸ್ಸಾಗಿದ್ದಾಗ ಸುಬ್ಬನ ಸಹೋದರಿ ಸುಬ್ಬಿ ಹೆಂಗಸು ಆಗ ಸುಮಾರು ಎಪ್ಪತ್ತೈದು ವರ್ಷದವಳಾಗಿದ್ದು ಆಕೆ ದೇಶಮಂಗಲ ಶ್ರೀ ಶಂಕರನಾರಾಯಣ ಕುಟ್ಟಿಚ್ಚಾತ ದೇವಸ್ಥಾನದ ಚಾಕರಿಯವಳಾಗಿದ್ದು ಆ ಪರಿಸರದಲ್ಲಿ ವಾಸವಾಗಿದ್ದುದನ್ನು ನೆನಪಿಸುತ್ತಾರೆ. ಪಾರ್ತಿಸುಬ್ಬನೂ ದೇಶಮಂಗಲದಲ್ಲಿ ಸೇವೆ ಸಲ್ಲಿಸಿದ್ದನೆಂದು ಹೇಳುತ್ತಾರೆ. ಸುಬ್ಬನ ಸಂಬಂಧಿಯಾದ ಪಾಟಾಳಿ ಈಶ್ವರಯ್ಯ ೧೯೪೫ರವರೆಗೆ ಈ ದೇವಸ್ಥಾನದಲ್ಲಿ ಸೇವೆ ಮಾಡಿಕೊಂಡಿದ್ದು ಸುಮಾರು ತನ್ನ ಎಪ್ಪತ್ತೈದನೆಯ ವರ್ಷದಲ್ಲಿ ಎಂದರೆ ಸುಮಾರು ೧೯೬೫ರಲ್ಲಿ ತೀರಿಕೊಂಡನೆಂದು ಹೇಳುತ್ತಾರೆ. ದೇಶಮಂಗಲ ಕುಟ್ಟಿಚ್ಚಾತ ದೇವಸ್ಥಾನಕ್ಕೆ ಸಂಬಂಧಪಟ್ಟು ಸನಿಹದಲ್ಲೇ ಇರುವ ರಕ್ತೇಶ್ವರಿಬನದೊಳಗೆ ಸುಬ್ಬಿಗಾಗಿ ಹಾಕಿದ ಬ್ರಹ್ಮರಾಕ್ಷಸ ಕಲ್ಲನ್ನು ಈಗಲೂ ಕಾಣಬಹುದು. ಸುಬ್ಬನ ಕುಟುಂಬಕ್ಕೂ ದೇಶಮಂಗಲ ದೇವಸ್ಥಾನಕ್ಕೂ ಶತಮಾನಗಳ ಸಂಬಂಧವಿತ್ತೆಂದು ಹೇಳುತ್ತಾರೆ. ಇಂದೂ ಇಲ್ಲಿ ಬ್ರಹ್ಮರಾಕ್ಷಸನ ಕಲ್ಲಿಗೆ ಪೂಜೆ ನೈವೇದ್ಯಗಳು ನಡೆಯುತ್ತವೆ. ಇದು ಚಿಂತನೀಯ ವಿಷಯ.

ಕುಂಬಳೆ ಸಮೀಪದ ಶೇಡಿಕಾವು ಶಂಕರನಾರಾಯಣ ದೇವಸ್ಥಾನದ ಪಕ್ಕದಲ್ಲಿ ಸುಬ್ಬನದು ಎನ್ನಲಾದ ಒಂದು ಮನೆಯ ನಿವೇಶನವನ್ನು ಇಂದೂ ಕಾಣಬಹುದು. ಆ ಸ್ಥಳವು ಮರಗಳಿಂದಲು ಪೊದೆಗಳಿಂದಲೂ ಕೂಡಿದ್ದು ಅಲ್ಲೊಂದು ಪಾಳುಬಿದ್ದ ಬಾವಿಯನ್ನು ಕಾಣಬಹುದು. ಪಕ್ಕದಲ್ಲಿಯೇ ಕಣಿಪುರ ದೇವಸ್ಥಾನದ ಅರ್ಚಕರ ಕುಟುಂಬದವರ ಮನೆ ಇದೆ. ಸುಬ್ಬನು ಶೇಡಿಕಾವು ಶಂಕರನಾರಾಯಣ ದೇವಸ್ಥಾನದ ಚಾಕರಿಯವನಾಗಿದ್ದನೆಂದೂ ಹೇಳುತ್ತಾರೆ. ಶೇಡಿಕಾವು ದೇವಸ್ಥಾನದ ಪಕ್ಕದಲ್ಲಿ ಒಂದು ಕಟ್ಟೆ ಇದ್ದು ಅದನ್ನು ಪಾರ್ತಿಸುಬ್ಬನ ಕಟ್ಟೆ ಎಂದು ಕರೆಯುತ್ತಾರೆ.

ಕರಾವಳಿಯ ಅತ್ಯಂತ ಪ್ರಾಚೀನ ಯಕ್ಷಗಾನ ದಶಾವತಾರ ಮಂಡಳಿ ಮೇಳವೆಂದರೆ ಕುಂಬಳೆ ಮೇಳ. ಕುಂಬಳೆ ನಾಯಕ ಮನೆತನದಿಂದಲೇ ಈ ಮೇಳವು ನಡೆಸಲ್ಪಡುತ್ತಿದ್ದು ಕುಂಬಳೆ ಮೇಳವೆಂದು ಪ್ರಖ್ಯಾತಿ ಪಡೆದಿತ್ತು. ಶತಮಾನಗಳ ಕಾಲ ವೈಭವದಿಂದ ಮೆರೆದಿದ್ದ ಈ ಮೇಳ ಸುಮಾರು ೧೯೧೮ರಲ್ಲಿ ನಿಂತು ಹೋಯಿತು. ಈ ಮೇಳಕ್ಕೆ ಸಂಬಂಧಿಸಿದ್ದ ಕಿರೀಟಾದಿಗಳು ತದನಂತರ ಇಷ್ಟಂಪಾಡಿ ಮೇಳವನ್ನು ಸೇರಿದ್ದವು. ಈ ಮೇಳದಲ್ಲಿದ್ದ ಮರದ ಗಣಪತಿ ವಿಗ್ರಹವು ಕಣಿಪುರ ದೇವಸ್ಥಾನದ ಪಶ್ಚಿಮ ಭಾಗದಲ್ಲಿ ನಾಯಕ ವಂಶಸ್ಥರ ಜಾಗದಲ್ಲಿಯೇ ಪ್ರತಿಷ್ಠಾಪಿಸಲ್ಪಟ್ಟು ಈಗಲೂ ನಿತ್ಯಪೂಜೆಗಳು ಸಲ್ಲುತ್ತಿವೆ.

“ಕುಂಬಳೆ ರಾಮಪ್ಪ ನಾಯಕರು ಸಾಹಿತ್ಯ ಸಂಗೀತ ಕಲಾಪ್ರೇಮಿಗಳೂ ಅಭಿಮಾನಿಗಳೂ ಆಗಿದ್ದರು. ಯಕ್ಷಗಾನದಲ್ಲಿ ತೆಂಕುತಿಟ್ಟನ್ನು ಅಳವಡಿಸಿ, ಗದ್ಯಪದ್ಯ ಸುಳಾದಿ ಗೀತಗಳಿಂದಲೂ, ರಾಗ–ತಾಳ ನೃತ್ಯಾದಿಗಳಿಂದಲೂ ಶಾಸ್ತ್ರೀಯ ಕಲೆಯನ್ನಾಗಿ ರೂಪಿಸಿದ ಪಾರ್ತಿಸುಬ್ಬನ ಸಲಹೆಯಿಂದಲೂ ಕುಂಬಳೆ ರಾಜರ ಆಶ್ರಯದಿಂದಲೂ ಬಂದು ಯಕ್ಷಗಾನ ದಶಾವತಾರ ಮೇಳವನ್ನು ಊರ್ಜಿತಗೊಳಿಸಿದ್ದರು. ಕ್ರಿ.ಶ.೧೮೬೦ರಷ್ಟಕ್ಕೆ ಕುಟುಂಬವು ವಿಭಾಗಗೊಂಡ ಸಂದರ್ಭದಲ್ಲಿ ಐದನೇ ಪ್ರವರದ ಸ್ಟೊರನಾಯ್ಕರ ಸಂತತಿಯಿಂದ ನಡೆಸಿಕೊಂಡು ಬರುತ್ತಿದ್ದು ಈಗ್ಗೆ ಐವತ್ತು ವರುಷಗಳ ಹಿಂದೆ ನಿಂತು ಹೋಯಿತು.[೨] ಇದು ಕುಂಬಳೆ ನಾಯಕ ವಂಶಸ್ಥರಲ್ಲಿ ಹಿರಿಯರಾಗಿದ್ದ ವಾಸುದೇವ ಚರಡಪ್ಪ ನಾಯಕರ ಬರೆಹ; ಮಾತು. ಅಂದರೆ ಪಾರ್ತಿಸುಬ್ಬನಿಗೂ ಕುಂಬಳೆ ಮೇಳಕ್ಕೂ ನಿಕಟ ಸಂಪರ್ಕವಿತ್ತೆಂದು ವೇದ್ಯವಾಗುವುದಿಲ್ಲವೇ. ಮಾತ್ರವಲ್ಲದೆ ಕುಂಬಳೆ ಮೇಳದ ಪ್ರಾಚೀನತೆಯನ್ನು, ಸುಬ್ಬನಿಗೆ ಯಕ್ಷಗಾನ ಕಲೆಯ ಬಗ್ಗೆ ಇದ್ದ ಜ್ಞಾನ; ತಿಳುವಳಿಕೆಯನ್ನು ಅರ್ಥೈಸಬಹುದು. ವಿದ್ಯಾ ಪರಿಣತರಾದ ನಾಯಕರ ಮಾತು ಚಿಂತನೀಯವೇ ಆಗಿದೆ.

ಕುಕ್ಕಿಲ ಕೃಷ್ಣಭಟ್ಟರು ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗ ಸಾಹಿತ್ಯಕ್ಕೂ ಕಥಕ್ಕಳಿಯ ಸಾಹಿತ್ಯಕ್ಕೂ ಇರುವ ಸಂಬಂಧವನ್ನು ಗುರುತಿಸಿದ್ದಾರೆ. ಅಂತೆಯೇ ಅವನು ಪ್ರಸಂಗಗಳಲ್ಲಿ ಬಳಸಿರುವ ಕೇಕವೃತ್ತದ ಕುರಿತೂ ಉಲ್ಲೇಖಿಸಿದ್ದಾರೆ. ಸುಬ್ಬನು ಕನ್ನಡಕ್ಕೆ ಸಹಜವಲ್ಲದ ವೃತ್ತ ವಿಶೇಷವನ್ನು, ಮಲಯಾಳ ಸಾಹಿತ್ಯದಲ್ಲಿ ಪ್ರಸಿದ್ಧ ಛಂದಸ್ಸಾದ ‘ಕೇಕಯ’ ವಾ ‘ಕೇಕ’ ಎಂಬ ವೃತ್ತವನ್ನು ಒಂದಿಷ್ಟು ಶಿಥಿಲಗೊಳಿಸಿ ತನ್ನ ಪ್ರಸಂಗಗಳಲ್ಲಿ ಅಳವಡಿಸಿದ್ದಾನೆ. ಈ ವೃತ್ತ ವಿಶೇಷ ಮೂಲತಃ ದ್ರಾವಿಡ ಛಂದಸ್ಸಿನದ್ದು; ಇವು ತಮಿಳಿ ‘ಆಶಿರಿಯ’ ವೃತ್ತಗಳಂತಿವೆ. (ಏಕದೇಶ ಸ್ಥಿರಾ ಜಾತಿ; ವೃತ್ತಂ ಗುರು ಲಘು ಸ್ಥಿರಂ)

**ಮಲಯಾಳ ವೃತ್ತ ಲಕ್ಷಣ[೩]**

೧. ಪ್ರತಿ ಪಾದದಲ್ಲಿಯೂ ೩೧೨೧೨೧೩೧೨೧೨ ಎಂಬೀ ಕ್ರಮದಲ್ಲಿ ಅಕ್ಷರಗಳನ್ನೊಳಗೊಂಡ ಆರು ಗಣಗಳಿದ್ದು ೧೪ ಅಕ್ಷರಗಳು.
೨. ಪ್ರತಿ ಗಣದಲ್ಲಿಯೂ ಒಂದೊಂದು ಗುರು ಇರತಕ್ಕದ್ದು; ಸರ್ವಗುರುಗಳೂ ಆಗಬಹುದು. ಆನ ಪ್ರತಿ ಪಾದದಲ್ಲಿಯೂ ಆಗು ಗುರುಗಳೂ ಉಳಿದವು ಎಂಟು ಲಘುಗಳು ಆದರೆ ಮಾತ್ರೆಗಳು ಮೂವತ್ತು. ಎಲ್ಲ ಅಕ್ಷರಗಳೂ ಗುರುಗಳಾದರೆ ಮೂವತ್ತನಾಲ್ಕು ಮಾತ್ರೆಗಳು.

---

೨. ಕುಂಬಳೆ ನಾಯಕರು – ಕುಂಬಳೆ ವಾಸುದೇವ ಚರಡಪ್ಪನಾಯಕ:೧೮–೨–೧೯೬೮ ಪುಟ–೩೧

೩. ವೃತ್ತಿ ಮಂಜರಿ – ಎ.ಆರ್. ರಾಜರಾಜವರ್ಮ, ಪ್ರಥಮ ಮುದ್ರಣ, ೧೯೦೪. ನನ್ನ ಪ್ರತಿ, ನವೆಂಬರ್ ೧೯೮೫ ಮುದ್ರಣ. ೮ನೆಯ ಅಧ್ಯಾಯ, ವೃತ್ತ ಸಂಖ್ಯೆ ೩೨೮

೩. ಹಾಗಾಗುವಾಗ ಪ್ರತಿ ಪಾದದಲ್ಲಿ ೨೦–೨೪ರ ಮಧ್ಯೆ ಮಾತ್ರಾ ಸಂಖೆ ನಿಲ್ಲಬಹುದು. ಆದರೆ ಅಕ್ಷರಗಳು ೧೪ ಎಂಬುದು ಸ್ಪಷ್ಟ.
೪. ಸಾಮಾನ್ಯವಾಗಿ ೨೨ ಅಥವಾ ೨೪ ಮಾತ್ರೆಗಳು ಆಗಬಹುದು.
೫. ಪಾದಾದಿಯಲ್ಲಿ ಸಮಾನತೆ ಇರಬೇಕು; ಎಂದರೆ ಒಂದನೆ ಪಾದ ಗುರುವಿನಿಂದ ಆರಂಭವಾದರೆ ಎರಡನೆಯ ಪಾದವೂ ಗುರುವಿನಿಂದಲೇ ಆರಂಭವಾಗಬೇಕು. ಅಥವಾ ಲಘುವಿನಿಂದಾದರೆ ಲಘುವಿನಿಂದಲೇ ಆರಂಭವಾಗಬೇಕು.
೬. ಏಳು ಅಕ್ಷರಗಳಿಗೆ ಯತಿ; ಅಪೂರ್ವವಾಗಿ ಯತಿ ವಿಲಂಘನವೂ ಇದೆ.

**ಉದಾ:**
ಸುರವಾ । ಹಿನೀ । ಪತೀ । ತನಯನ್ । ಗಣಾ । ಪತೀ
ಸುರವಾ । ಹಿನೀ । ಪತೀ । ಪ್ರಮಥ । ಬುಧ । ಪತೀ
ಶಕ್ರನೋ । ಕೃತಾ । ರ್ಥನೋ । ಪಾಶಿಯೋ । ಕುಬೇ । ರನೇ
ದೃಷ್ಟಾಂತಂ । ಚೈದ । ತವನ್ । ತನ್ಯೆತೋ । ನೆಡೋ । ಕುವ್ವೆನ್
ಕೈಲಾಸಾ । ಚಲಾ । ಸೂರ್ಯ । ಕೋಟಿಶೋ । ಭಿತೇ । ವಿಮಾ
ಲಾಲಯೇ । ರತ್ನ । ಪೀಡೋ । ಸಂವಿಷ್ಟುಂ । ಧ್ಯಾನ । ನಿಷ್ಠಂ

**ಸುಬ್ಬನ ಪದ್ಯ –**
ದಶರ । ಥನ । ರಪಾ । ಲ ಪೇಳ್ದು । ದಂ । ಕೇಳು । ತಾಗ = ೧೫
ಎಸೆವರುಣ ಮುಖಾಕ್ರಾಂತಂ ತತ್ಸಭಾ ಮಧ್ಯದೊಳಗೆ = ೧೭
ಉಸಿರಿಡುತ್ತಂ ಭುಗಿಭುಗಿಲೆನುತಾಚಾರ್ಯನನ್ನೀಕ್ಷಿಸುತ್ತಂ = ೧೯
ಕುಶಿಕಜನತಿ ಕೋಪಾರೂಢಂ ತಾನಾಗಿರ್ದು ಪೇಳ್ದಂ = ೧೬

ಇದು ಮಲೆಯಾಳ ಕೇಕ ವೃತ್ತವನ್ನು ಶಿಥಿಲಗೊಳಿಸಿ ಸುಬ್ಬನು ರಚಿಸಿದ ಪದ್ಯ. ಮಲೆಯಾಳದಲ್ಲಿ ದ್ವಿತೀಯ ಪ್ರಾಸವಿಲ್ಲ; ಸುಬ ಕನ್ನಡದ ಪ್ರಾಸ ನಿಯಮವನ್ನು ಪಾಲಿಸಿದ್ದಾನೆ. ಇದೊಂದು ಸಮಚತುಷ್ಪದಿ. (ಸುಬ್ಬನ ಇತರ ರಚನೆಗಳು–೧೪೦, ೧೬೩, ೧೭೯, ೧೮೪, ೧೯೫) ಉಳಿದ ಯಾವ ಪ್ರಸಂಗ ಕರ್ತೃಗಳಲ್ಲೂ ಈ ವೃತ್ತ ಪ್ರಯೋಗವನ್ನು ಕಾಣಲಾರೆವು. ಸುಬ್ಬನಿಗೆ ಮಲೆಯಾಳ ಭಾಷೆ, ಸಾಹಿತ್ಯ, ಶಾಸ್ತ್ರ ಪರಿಚಯವಿತ್ತೆಂದು ತಿಳಿಯಬಹುದಲ್ಲವೇ?

ಕೋಳ್ಯೂರು ಶ್ರೀ ಶಂಕರನಾರಾಯಣ ದೇವಸ್ಥಾನ ಮತ್ತು ಪರಿಸರವನ್ನು ಸುಬ್ಬನು ಬಲ್ಲವನಾಗಿದ್ದನೆಂದು ಹೇಳುತ್ತಾರೆ. ನಾನೊಮ್ಮೆ ಕ್ಷೇತ್ರ ಕಾರ್ಯಕ್ಕೆಂದು ಕೋಳ್ಯೂರಿಗೆ

ಹೋದಾಗ ಅಲ್ಲಿನವರು ಹೇಳಿದ ಮಾಹಿತಿ ಇಂತಿದೆ. ಕುಂಬಳೆ ಸೀಮೆಯ ಹವ್ಯಕ ಭಾಷೆಯನ್ನು ಚೆನ್ನಾಗಿ ಬಲ್ಲವನಾಗಿದ್ದ ಸುಬ್ಬನು ಅಲ್ಲಿ ಯಾವುದೋ ತನಗೆ ಪರಿಚಯವಿರುವ ಹವ್ಯಕ ಮನೆಗೆ ಹೋಗಿದ್ದನಂತೆ. ಆಗ ಅಲ್ಲಿಯವರೊಮ್ಮೆ ಇವನಲ್ಲಿ ಬದನೆಕಾಯಿಯ ಬಗ್ಗೆ ಪದ ಬರೆಯುವಂತೆ ಕೇಳಿಕೊಂಡರಂತೆ. ಆಗ ಅವನು ಬರೆದ ರಚನೆಯೆಂದು ಅಲ್ಲಿಯವರು ಹೇಳಿದ್ದು–

ಅಂಗದ ಸಂಧಾನ ಪ್ರಸಂಗದಲ್ಲಿ ಅಂಗದ ಪ್ರಹಸ್ತನ ಸಂಭಾಷಣೆ ಆದ ಮೇಲೆ ರಾವಣ–

ಈ ಪರಿ । ಯಿಂದಂ । ವರ್ಣಿಸೆ
ಭೂಪಾ । ಲನ ಪಾ । ಲ್ಯದೊಳಗೆ । ಕಪಿನಾ । ಯಕರಾ
ಕೋಪಿಸಿ । ದಶಕಂ । ಧರನುಂ
ತಾ ಪೌ । ರುಷದಿಂ । ಪೇಳ್ದನು ಶು । ಕ ಸಾರ । ಣರ್ಗಂ ॥೩೪॥

ರಾವಣ – ರಾಗ : ಕೇತಾರ ಗೌಳ – ಅಷ್ಟತಾಳ –
ಮರುಳಾದೆ । ಯೇನೋನಿ । ಬದನೆಕಾ । ಯನು ದೊಡ್ಡ
ಪರಬ್ರಹ್ಮ । ವೆಂಬ ಹಾ । ಗೆ = ॥
ಮರದಿಂದ । ಮರಕೆ ಲಂ । ಗಿಸುವಂಥ । ಕಪಿಗಳ್ಸಂ
ಗರದೊಳೆ । ಚ್ಚಾಡುವ । ವೆ–

(ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗಗಳು, ಪು. ೩೦೮)

**ಜನಪದರ ಮಾತನ್ನು ನಂಬಬಹುದೇ?**

ಸುಬ್ಬನ ಪದ್ಯ ಸರಳ, ಸುಂದರ ಅರ್ಥಗೌರವವುಳ್ಳದು. ಆದುದರಿಂದಲೇ ಭಿಕ್ಷುಕರೂ ಕೂಡ ಸುಬ್ಬನ ಪದ್ಯವನ್ನು ಹಾಡುತ್ತಾ ಭಿಕ್ಷೆ ಬೇಡುತ್ತಿದ್ದುದನ್ನು ಬಾಲ್ಯದಲ್ಲಿ ನಾನು ಗಮನಿಸಿದ್ದೇನೆ. ನನ್ನ ತೀರ್ಥರೂಪರು ಇಚ್ಲಂಪಾಡಿ ಮೇಳದ (ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಮತ್ತು ಇಪ್ಪತ್ತನೆಯ ಶತಮಾನದ ಆದಿ ಭಾಗ) ಬಯಲಾಟಗಳನ್ನು ನೋಡುತ್ತಿದ್ದರಂತೆ. ಅವರಿಗೂ ಸುಬ್ಬನ ಪ್ರಸಂಗಗಳ ಕೆಲವು ಪದ್ಯಗಳು ಕಂಠಸ್ಥವಾಗಿರುತ್ತಿದ್ದುದನ್ನು ತಿಳಿದಿದ್ದೆನು.

**ಸುಬ್ಬನಿಗೆ ಕನ್ನಡ ಸಂಧಿ ; ಸಮಾಸಗಳ ಪರಿಚಯ ಚೆನ್ನಾಗಿದ್ದಿತು.**

ಸ್ತುತಿ ಪದ್ಯ – ಸಭಾ ಲಕ್ಷಣ – ಪು–೬೧೯
ಗಜಮುಖ । ದವಗೆ ಗ ।ಣಪಗೆ –। ಚೆಲ್ವ

ತ್ರಿಜಗವ । ದಿತನಿಗಾ । ರತಿಯೆತ್ತಿ । ರೆ – ಪಲ್ಲವಿ
ಒಳ್ಳಿತಾ । ದವಲು ತೆಂ । ಗಿನಕಾಯಿ । ಕಡಲೆಯ
ಉಳ್ಳುಂಡ । ಲಿಗೆ ಕಬ್ಬು । ಮೆಲುವವಗೆ – ॥

ಕೆಲವು ಜನ ಭಾಗವತರು "ಏಳ್ಳುಂಡೋಳಿಗೆ ಕಬ್ಬುಮೆಲುವವಗೆ" ಎಂದು ಹಾಡುತ್ತಾರೆ. ಇಲ್ಲಿ ಎಳ್ಳು+ಉಂಡಲಿಗೆ ಎಂದು ಸಂಧಿ ವಿಂಗರಿಸಬೇಕು. ಉಂಡಲಿಗೆ ಎಂದರೆ ಒಂದು ಬಗೆಯ ಅಕ್ಕಿಯ ದೋಸೆ. ಇಲ್ಲಿ ಯಾವ ಸಂಧಿಯೆಂದು ತಿಳಿಸಬೇಕಾಗಿಲ್ಲ.

ಸುಬ್ಬನು ಜನಪದ ಕಥೆಗಳಿಂದಲೂ ವಸ್ತುವನ್ನು ಆಯ್ದುಕೊಂಡಂತೆ ತೋರುತ್ತಿದೆ. ಅಳಿಲೊದು ರಾಮನ ಸೇತುಬಂಧಕ್ಕೆ ಸಹಕರಿಸಿದೆಯೆಂದು ಜನಜನಿತ ಕಥೆ.

ಕರಿರಥ । ತುರಗ ಕಾ । ಲಾಳು –। ತಾವೇ
ಪರಿವಾರ । ಗಿಹರಯ್ಯ  ಕೇಳು
ಕರಡಿ ಸಿಂ । ಗಳಿಕ ವಾ । ನರ ಮುಸು । ಕೆಂಜಣಿಲ್
ಮರಿಗಳ್ಳೆದವವೆ । ಕೆಲವು ಬಿಳುಪಾ । ಗಿರುವ ಮುದಿಮುದಿಕಪಿಗಳ
ಸೇತುಬಂಧ =– ಪು. ೧೫, ಪು. ೨೫೩
ಕೆಂಜಣಿಲ್ – ಕೆಚ್ಚನೆ + ಅಣಿಲ್ – ಕೆಂಪು ಅಳಿಲು.
(ಸಮಂತ ದೇಕಾಶ್ರಯ ಮಾಗಿರೆ ಕರ್ಮಧಾರಯಂ)

ಕುಂಬಳೆ ಪರಿಸರದ ಹವ್ಯಕರ ಮನೆಗಳಲ್ಲಿ ತಯಾರಿಸುವ ಭಕ್ಷ್ಯಗಳ ವಿವರಣೆ 'ಕುಂಭಕರ್ಣಾದಿ ಕಾಳಗ'ದ ಕುಂಭಕರ್ಣವ ಪಾರಣೆಯ ಸಂದರ್ಭದಲ್ಲಿ ಬಂದಿವೆ  ಎಣ್ಣಿದೂರಿಗೆ, ಅತಿರಸ (ಬಿಂದು ಸಿಹಿ ತಿಂಡಿ) ಸುಕಿನುಂಡೆ, ಲಡುಗೆ ಪೆರಡಿ ಪಾಯಸ (ಹಲಸಿ ಹಣ್ಣಿನಿಂದ ತಯಾರಿಸಿದ ಪಾಯಸ) ತುಪ್ಪದಲಿ ಹುಳಿದ ತಾಳಿಲ, ತಂಬುಳಿ, ಬಾಳುಕ, ಸೆಂಡಿಗೆ ಇತ್ಯಾದಿ. (ಪುಟ–೩೪೬, ಪದ್ಯ–೧೮ ರಿಂದ) ಸುಬ್ಬನಿಗೆ ತೊರವೆ ರಾಮಾಯಣ, ಕೌಶಿಕ ರಾಮಾಯಣ, ಲಕ್ಷ್ಮೀಶನ ಜೈಮಿನಿ ಭಾರತ ಕಾವ್ಯಗಳ ಪರಿಚಯವಿತ್ತು.

ತೊ.ರಾ. ಮಾರೀಚ ರಾವಣನಲ್ಲಿ –
ಸಿಕ್ಕಲ ಜೆಯಳು ಸೀತೆ ಸಿಕ್ಕಿದ
ಡಕ್ಕಲಜೆಯ ಸತ್ಯವಿದು ಕೈ
ಯಿಕ್ಕೆ ಕದನಕೆ ಸೋಲಲಜೆಯನು ರಾಮನಿದು ಸಿದ್ಧ (ಅ.ಂ. ೨–೪೪)
ಸಿಕ್ಕಿದಡೆ + ಅಕ್ಕಲು + ಅಜೆಯಳು – ಅಕ್ಕಲು = ನಾಶ.
ಸುಬ್ಬನ ಪ್ರಸಂಗದಲ್ಲಿ ಇದನ್ನು ಗಮನಿಸಿರಬಹುದು.

ಕೌಶಿಕ ರಾಮಾಯಣವನ್ನು ಬರೆದವನು ವರಕವಿ ಬತ್ತಲೇಶ್ವರ. ಡಾ. ಶಿವರಾಮ ಕಾರಂತರು ಈ ಕೃತಿಯನ್ನು ಸಂಪಾದಿಸಿ ತಮ್ಮ ಹರ್ಷ ಮುದ್ರಣಾಲಯದಲ್ಲಿ ಛಾಪಿಸಿ ೨೫-೧೨-೧೯೬೫ರಲ್ಲಿ ಪ್ರಕಟಿಸಿದ್ದಾರೆ. ರಾಮ ಲಕ್ಷ್ಮಣರು ವೈರಿಗಳಾದ ಇಂದ್ರಜಿತು ರಾವಣಾದಿಗಳನ್ನು ನಾಶಪಡಿಸಲು ಬಿಲ್ಲು ಹಿಡಿದಾಗಲೆಲ್ಲಾ ತಮ್ಮ ಗುರುಗಳಾದ ಕೌಶಿಕನನ್ನು ನೆನೆಯುವುದನ್ನು ಕವಿ ಸೂಚಿಸುತ್ತಾನೆ. ಅವರಿಗೆ ಶಸ್ತ್ರ ಸಾಮರ್ಥ್ಯವು ಕೌಶಿಕನಿಂದ ದೊರಕ್ಕಿದ್ದೆಂಬ ಅರ್ಥದಲ್ಲಿ ಕೌಶಿಕ ರಾಮಾಯಣ.

ಕವಿಯ ಊರು ಕುಮಟಾ-ಶಿರಸಿ ಸಮೀಪದ ಯಾಣ. ಕಾಲ ಸುಮಾರು ಕ್ರಿ.ಶ.೧೫೦೦ರ ಆಸುಪಾಸು. ಕುಮಾರ ವಾಲ್ಮೀಕಿಯ ಅನಂತರ ಇರಬಹುದು. ಕವಿಯು ಈ ಪ್ರಾಂತದ ದೇವ ಸಮೂಹವನ್ನು ತನ್ನ ಕಾವ್ಯದಲ್ಲಿ ಚಿತ್ರಿಸಿದ್ದಾನೆ; ಮಲೆನಾಡಿನ ವಿಶಿಷ್ಟವಾದ ಕಜ್ಜಾಯ ಪದಾರ್ಥಗಳನ್ನು ಬಣ್ಣಿಸಿದ್ದಾನೆ. ಹವ್ಯಕ ಜನವರ್ಗದ ಭಾಷಾ ಪ್ರಯೋಗಗಳನ್ನು ಸಾಕಷ್ಟು ಬಳಸಿದ್ದಾನೆ; ನಪುಂಸಕ ಏಕವಚನ ಪ್ರಯೋಗ ಕೃತಿಯುದ್ದಕ್ಕೂ ಇದೆ. ಈತ ಹವ್ಯಕ ಬ್ರಾಹ್ಮಣನೇ ಇರಬೇಕು. ಮಾತ್ರವಲ್ಲದೆ ಈ ರಾಮಾಯಣದ ಪ್ರತಿಕಾರರು; ಪ್ರತಿಗಳು ಸಿಕ್ಕಿದ್ದು ಈ ಪ್ರದೇಶದಲ್ಲೇ ಎಂದು ಸಂಪಾದಕರು ಹೇಳಿಕೊಂಡಿದ್ದಾರೆ.

ಕೃತಿಯಲ್ಲಿ ೪೪ ಸಂಧಿಗಳಿದ್ದು ಒಟ್ಟು ೨೫೧೬ ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಪದ್ಯಗಳಿವೆ. ಪಾರ್ತಿಸುಬ್ಬನು ಕುಮಟ ಪ್ರದೇಶಕ್ಕೆ ಹೋಗಿದ್ದು ಕೌಶಿಕ ರಾಮಾಯಣದ ಹಸ್ತಪ್ರತಿಯನ್ನು ನೋಡಿರಲೇಬೇಕು. ಪ್ರಸಂಗದ ಪದ್ಯಗಳಿಗೂ ಕೌಶಿಕ ರಾಮಾಯಣದ ಪದ್ಯಗಳಿಗೂ ಹೋಲಿಕೆ ಇದೆ.

ಉದಾ: ಅತಿಕಾಯ ಕಾಳಗ, ಸುಬ್ಬನಿಗೆ ನಾಗಚಂದ್ರನ "ರಾಮಚಂದ್ರ ಚರಿತ ಪುರಾಣ" ಯಕ್ಷಗಾನ ಪ್ರಸಂಗಕ್ಕೆ ಆಕರವಾಗಿಲ್ಲ. ಪಾರ್ತಿಸುಬ್ಬನ ಪ್ರಸಂಗಗಳ ಆಳವಾದ ಅಧ್ಯಯನ ನಡೆದಿದೆಯೇ? ಭಾಷೆ; ಛಂದಸ್ಸು ಇತ್ಯಾದಿ.

ಕ್ಷೇತ್ರಕಾರ್ಯ ಕೈಕೊಂಡರೆ ಅವನ ಪರ್ಯಟನದ ಪ್ರದೇಶಗಳನ್ನು ಗುರುತಿಸಿ ಹಿರಿಯ ಸಂಪನ್ಮೂಲ ವ್ಯಕ್ತಿಗಳನ್ನು ಸಂಪರ್ಕಿಸಿದರೆ ಹೆಚ್ಚಿನ ಮಾಹಿತಿ ಸಿಗಲೂಬಹುದು. ಸುಬ್ಬನ ಮಾತೃಭಾಷೆ ತುಳುವಾದರೂ ಆತನಿಗೆ ಹವಿಗನ್ನಡ, ಕನ್ನಡ, ಮಲಯಾಳ ಭಾಷೆಗಳ ತಿಳುವಳಿಕೆ ಇತ್ತು. ಕುಕ್ಕಿಲ ಕೃಷ್ಣಭಟ್ಟರು ಸೂಚಿಸಿದ ಹಾದಿಯಲ್ಲಿ ಕಥಕಳಿ ರಾಮನಾಟ್ಯ ಕಲೆ ಸಾಹಿತ್ಯದ ತೌಲನಿಕ ಅಧ್ಯಯನಕ್ಕೆ ಸಾಧ್ಯತೆ ಇದೆ. ಸುಬ್ಬನಿಗೆ ಸಂಸ್ಕೃತ ಭಾಷೆಯ ಪರಿಚಯವೂ ಚೆನ್ನಾಗಿತ್ತೆಂದು ತೋರುತ್ತದೆ. ಅವನ ಪ್ರಸಂಗಗಳು ಸರಳಕ್ಕೆ ಸರಳ ಆದರೆ ಅಷ್ಟೇ ಗಂಭೀರ. ಕಲಾವಿದನಿಗೆ ಅವನ ಪದ್ಯಗಳ ಚೆನ್ನಾಗಿ ಪರಿಚಯವಿದ್ದರೆ

ಬೇರೆ ಸಿದ್ಧರೆ ಇಲ್ಲದೆಯೂ ಉತ್ತಮವಾಗಿ ನಿರ್ವಹಿಸಬಹುದಾಗಿದೆ. ಪ್ರಸಂಗ ಪದ್ಯಗಳು ಧ್ವನಿ ರಮ್ಯತೆಯಿಂದ ಅರ್ಥಗೌರವದಿಂದ ಕೂಡಿಕೊಂಡಿವೆ. ಪಾತ್ರ ಪೋಷಣೆಗೆ ಬೇಕಾದ ಪರಿಕರಗಳು ಪದ್ಯಗಳಲ್ಲೇ ಅಡಕವಾಗಿವೆ. ಅವನು ಬಳಸಿರುವ ಛಂದಸ್ಸು ಕಾಲೋಚಿತ ಕಲೋಚಿತ ಅವನ ಶೈಲಿ ಅನನುಕರಣೀಯ, ಸುಭಗ ಶೈಲಿ, ಯಕ್ಷಗಾನಕ್ಕೆ ಹೇಳಿ ಮಾಡಿಸಿದ ಶೈಲಿ. ಪ್ರಾಯಃ ಅವನಂತೆ ಪ್ರಸಂಗ ಬರೆದವರಿಲ್ಲ. ಯಕ್ಷಗಾನ ರಂಗಭೂಮಿಯ ಸರ್ವಾಂಗೀಣ ಪ್ರಭುತ್ವ ಅವನಿಗಿತ್ತು.

ನನ್ನ ನಾಲ್ಕು ಮಾತುಗಳು ಪಾರ್ತಿಸುಬ್ಬನ ಕುರಿತು ಹೆಚ್ಚಿನ ಅಧ್ಯಯನಕ್ಕೆ ತೋರುಗಂಬವಾಗಿ ಪ್ರೇರಣೆಯನ್ನೊದಗಿಸಲೆಂದು ಹಾರೈಸುತ್ತೇನೆ.

* * *

## ಗೋಷ್ಠಿ – ೩

# ಪಾರ್ತಿಸುಬ್ಬನ ಕೃತಿ ಪರಿಚಯ

**– ಡಾ. ಆನಂದರಾಮ ಉಪಾಧ್ಯ**

ಕಾವ್ಯಾತ್ಮಕವಾದ ಹತ್ತು ಯಕ್ಷಗಾನ ಪ್ರಸಂಗಗಳನ್ನು ರಚಿಸಿರುವ ಪಾರ್ತಿಸುಬ್ಬನನ್ನು 'ಯಕ್ಷಗಾನದ ವಾಲ್ಮೀಕಿ' ಎಂದೇ ಜನತೆ ಪರಿಭಾವಿಸಿದೆ. ಈತನು ರಾಮಾಯಣಕ್ಕೆ ಸಂಬಂಧಿಸಿದಂತೆ ಎಂಟು ಪ್ರಸಂಗಗಳನ್ನು ರಚಿಸಿರುವುದು ಈ ಹೇಳಿಕೆಗೆ ಮುಖ್ಯ ಕಾರಣವಾಗಿದೆ. ಇದರೊಂದಿಗೆ ಸಂಸ್ಕೃತದ ಮಹಾಕವಿಗಳ ಸಾಲಿನಲ್ಲಿ ವಾಲ್ಮೀಕಿ ವಿರಾಜಿಸುವಂತೆ ಪಾರ್ತಿಸುಬ್ಬನು ಯಕ್ಷಗಾನ ಕವಿಗಳ 'ಗಡಣ'ದಲ್ಲಿ ಎದ್ದು ಕಾಣುವ ಪ್ರತಿಭೆಯಾಗಿದೆ. ಆದ್ದರಿಂದಲೇ ಯಕ್ಷಗಾನದಲ್ಲಿ ಆತನಿಗೆ 'ಮಹಾಕವಿ'ಯ ಪಟ್ಟ ಲಭಿಸಿದೆ. ಐದು ಸಾವಿರಕ್ಕೂ ಹೆಚ್ಚಿರುವ ಪ್ರಸಂಗ ಸಾಹಿತ್ಯದಲ್ಲಿ ಆತನ ಪ್ರಸಂಗಗಳು ಸಾಹಿತ್ಯಿಕ ಕಾರಣದಿಂದ ಹಾಗೂ ರಂಗನಡೆಯ ದೃಷ್ಟಿಯಿಂದ ಮತ್ತು ಸಾಮಾನ್ಯರ ಹೃದಯಕ್ಕೆ ಲಗ್ಗೆ ಇಡಬಲ್ಲ ಶಕ್ತಿಯಿಂದ ಸರ್ವಕಾಲಕ್ಕೂ ಸರ್ವಮಾನ್ಯವಾಗಿದೆ. ಓದುವ ಸಾಹಿತ್ಯವನ್ನು ಮಾತ್ರ ನಿಜವಾದ ಸಾಹಿತ್ಯ ಎಂದು ಪರಿಗಣಿಸುವ ಕನ್ನಡ ವಿದ್ವತ್‌ಲೋಕ ಪಾರ್ತಿಸುಬ್ಬನಂತಹ ಜನಾದರಣೀಯನನ್ನು ಕಡೆಗಣಿಸಿದೆ ಎಂದು ಖೇದದಿಂದ ಹೇಳಬೇಕಾಗಿದೆ. ಇದನ್ನು ಹೋಗಲಾಡಿಸಲು ಆತನ ಕೃತಿಗಳ ಪರಿಶೀಲನೆ, ಮರುಪರಿಶೀಲನೆ ಆಗಾಗ ನಡೆಯುತ್ತಾ ಇರಬೇಕು. ಆತನ ಕಾವ್ಯದ ಹಿರಿಮೆಯನ್ನು ವಿದ್ವತ್ ಲೋಕಕ್ಕೆ ಪರಿಚಯಿಸುವ ಕಾರ್ಯ ನಿರಂತರವಾಗಿರಬೇಕು. ವಿದ್ವಾಂಸರಿಗೆ "ಅಯ್ಯಾ ನೀ ಕೇಳಿದಡೆ ಕೇಳು, ಕೇಳ್‌ದಿರ್ದಡೆ ಮಾಣು ನಾ ಹಾಡಿದಲ್ಲದೆ ಸೈರಿಸಲಾರೆನಯ್ಯ" ಎಂಬ ನಿಲುವನ್ನು ಯಕ್ಷಗಾನ ಲೋಕ ತಾಳಬೇಕಾಗುತ್ತದೆ. ದೃಶ್ಯಕಾವ್ಯಗಳ ಮಾನದಂಡವನ್ನು ಸಾಹಿತ್ಯ ವಿಮರ್ಶಕರು ಅರಿತು ಉಪಯೋಗಿಸುವಂತೆ ಮಾಡಬೇಕಾಗಿದೆ. ಆಗ ಮಾತ್ರ ಪಾರ್ತಿಸುಬ್ಬನಂತಹ ಶ್ರೀಸಾಮಾನ್ಯರ ಹೃದಯಗೆದ್ದು ಯಕ್ಷಗಾನ ಕವಿಗಳಿಗೆಲ್ಲ ಮನ್ನಣೆ ಲಭಿಸುತ್ತದೆ.

ಪ್ರಾಚೀನ ಆಲಂಕಾರಿಕರೆಲ್ಲ ಕಾವ್ಯವೆಂದರೆ ದೃಶ್ಯಕಾವ್ಯವೆಂಬ ಅರ್ಥವಿತ್ತು. ನಮ್ಮವರು "ಕಾವ್ಯೇಷು ನಾಟಕಂ ರಮ್ಯಂ" ಎಂದವರು. ಶಬ್ಧ, ಅರ್ಥಗಳ ಸಮೂಹವನ್ನು ಕಾವ್ಯದ ಅಂಗವೆಂದು ಭಾವಿಸಿದವರು. ಕಾಳಿದಾಸನು ವಾಗಾರ್ಥಗಳಿಗೆ ಪಾರ್ವತಿ ಪರಮೇಶ್ವರರ ಸಮಾನಸ್ಥಾನ ಕೊಟ್ಟಿದ್ದಾನೆ. ಧ್ವನಿಯು ಕಾವ್ಯದ ಆತ್ಮವಾಗಿದ್ದು ರಸವು ಪ್ರಾಣವಾಗಿದೆ. ರಸಾತ್ಮಕವಾದ ವಾಕ್ಯಗಳನ್ನು ಕಾವ್ಯ ಎಂದು ಕರೆದಿದ್ದಾರೆ. ಈ ನಿಟ್ಟಿನಿಂದ ಕಾವ್ಯದ ಅಧ್ಯಯನ ಮಾಡಬೇಕಾಗಿದೆ. ಯಕ್ಷಗಾನದ ಪ್ರಸಂಗಗಳು ಕೂಡ ಕಿರು ಕಾವ್ಯಗಳಾಗಿದ್ದು ರಸಾತ್ಮಕವೇ ಆಗಿವೆ. ಕವಿರಾಜಮಾರ್ಗಕಾರ ಹೇಳಿರುವ 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣಿತ ಮತಿಗಳ್' ಎಂದಿರುವುದು. ಯಕ್ಷಗಾನದಂತಹ ಹಾಡುಗಬ್ಬಗಳ ರಚನಾಕಾರರ ಕುರಿತೇ ಆಗಿರಬೇಕು. ಯಕ್ಷಗಾನ ಪ್ರಸಂಗ ಸಾಹಿತ್ಯ ವಿರಾಮದಲ್ಲಿ ಕೂತು, ಓದಿ, ಹಾಡಿನ ಧ್ವನಿತಾರ್ಥಗಳನ್ನು ಮೆಲುಕು ಹಾಕುವಂತಾದ್ದಲ್ಲ. ಇದಕ್ಕಿಂತ ಭಿನ್ನವಾಗಿದ್ದು ಅದು ರಂಗದಲ್ಲಿ ಧ್ವನಿಸುವಂತಿರಬೇಕು. ತಾಳ, ಲಯ, ಹಾಡುವ ಮಟ್ಟುಗಳೆಲ್ಲದರ ಬಳಕೆಯ ಮೂಲಕ ರಂಜಿಸುವ ಗುಣ ಇರಬೇಕು. ಹಾಡುಗಳ ಗುಣಮಟ್ಟುಗಳನ್ನು ಅಳೆಯಬೇಕಾದ್ದು ಅವು ಪ್ರದರ್ಶನಾತ್ಮಕವಾಗಿದ್ದು, ಭಾವಾಭಿವ್ಯಕ್ತಿಗೆ ಅವಕಾಶ ಕೊಡುವಂತಿರಬೇಕು. ಅಲ್ಲಿನ ಹಾಡುಗಳ ಮನರಂಜನೆಯೊಂದಿಗೆ ನವರಸಗಳ ಸೃಷ್ಟಿಗೆ ಹೇತುವಾಗಿರಬೇಕು. ರಾಗ–ತಾಳಗಳ ಮೂಲಕ ಪ್ರೇಕ್ಷಕನ ಕೇಳುಗನ ಮನದಲ್ಲಿ ರಸೋತ್ಪತ್ತಿಯಾಗುತ್ತದೆ. ಪ್ರಯೋಗದಲ್ಲೇ ಅವುಗಳ ನಿಜಸತ್ವದ ಅರಿವು ಉಂಟಾಗುತ್ತದೆ.

ರಾಗಗಳ, ತಾಳಗಳ ಬಳಕೆ ಕೇವಲ ಯಕ್ಷಗಾನ ಪ್ರಬಂಧಗಳಂತಹ ಹಾಡುಗಳಿಗೆ ಮಾತ್ರವಲ್ಲ ಪ್ರಾಚೀನ ಕಾವ್ಯಗಳಲ್ಲೂ ರಾಗ–ತಾಳಗಳ ನಿರ್ದೇಶನಗಳನ್ನು ಕವಿ ನೀಡಿರುವ ಉದಾಹರಣೆಗಳುಂಟು. ಕ್ರಿ.ಶ.೧೨೭೫ರ ಸುಮಾರಿಗೆ ಇದ್ದ ಜೈನಕವಿ ಕುಮುದೇಂದುವು ತನ್ನ 'ರಾಮಾಯಣ'ದ ಪ್ರತಿಸಂದಿಗೂ ವಿವಿಧ ಷಟ್ಪದಿಗಳನ್ನು ಬಳಸಿ ನಿರ್ದಿಷ್ಟರಾಗಗಳನ್ನು ಸೂಚಿಸುತ್ತಾನೆ. ೧೩ನೇ ಶತಮಾನದ ಕವಿ ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವ ಪುರಾಣ'ವು ದ್ವಿಪದಿ ಛಂದಸ್ಸಿನಲ್ಲಿ ರಾಗಗಳ ಬಳಕೆಯೊಂದಿಗೆ ಜನಪ್ರಿಯವಾಗಿದೆ. ಮುಂದೆ ಕ್ರಿ.ಶ. ೧೪೦೦ರ ಕಾಲದಲ್ಲಿದ್ದು ಭೀಮಕವಿ ಇವನನ್ನೇ ಅನುಸರಿಸಿ ತನ್ನ 'ಬಸವ ಪುರಾಣ'ದಲ್ಲಿ ಅನೇಕ ರಾಗಗಳನ್ನು ಸಂದರ್ಭಕ್ಕೆ ತಕ್ಕಂತೆ ಸೂಚಿಸುತ್ತಾನೆ. ಮಾಳವಗೌಳ, ನಾಟಿ, ಬಿಲಹರಿ, ಭೈರವಿ ಮುಂತಾದ ರಾಗಗಳ ಬಳಕೆಯ ಉಲ್ಲೇಖವಿದೆ. ರಾಗ, ತಾಳಗಳು ಬಂದಿವೆ ಎಂಬ ಕಾರಣಕ್ಕೆ ಇವರೆಲ್ಲರ ಕೃತಿಗಳನ್ನು ಕಡೆಗಣಿಸಬಾರದು. ಯಕ್ಷಗಾನ ಕವಿಗಳು ತಮ್ಮ ಕಿರುಕಾವ್ಯಗಳಲ್ಲಿ ರಾಗತಾಳಗಳನ್ನು ಬಳಸಿದ್ದಾರೆ ಎಂಬ ಮಾತ್ರಕ್ಕೆ ಅವುಗಳ ಮಹತ್ವವನ್ನು ಪರಿಗಣಿಸದೆ ಇರುವುದು ಸರಿಯಲ್ಲ. ಅದೇ ರೀತಿ ಆಶುಭಾಷಣವುಳ್ಳ ಯಕ್ಷಗಾನದಲ್ಲಿ ಪಾತ್ರಗಳು ಆಡುವ ಮಾತಿನ ಮೂಲಕ ಮೌಖಿಕ ಸಾಹಿತ್ಯ ಸೃಷ್ಟಿಯು ಆಗುತ್ತಿರುತ್ತದೆ. ಹೀಗೆ ಹಾಡುವ ಪದ್ಯ, ಆಡುವ ಗದ್ಯಗಳ ಮೂಲಕ ಕನ್ನಡ ಸಾಹಿತ್ಯಲೋಕಕ್ಕೆ ಪಾರ್ತಿಸುಬ್ಬನಂತಹ ಯಕ್ಷಗಾನ ಕವಿಗಳು ಮಹತ್ತರವಾದ

ಕೊಡುಗೆಯನ್ನು ನೀಡುತ್ತಿದ್ದಾರೆ. ಸೀತಾಕಲ್ಯಾಣ, ಪಟ್ಟಾಭಿಷೇಕ, ಪಂಚವಟಿ, ವಾಲಿ–ಸುಗ್ರೀವ ಕಾಳಗ, ಉಂಗುರಸಂಧಿ ಅಥವಾ ಚೂಡಾಮಣಿ, ಸೇತುಬಂಧನ, ಅಂಗದ ಸಂಧಾನ ಕುಂಬಕರ್ಣಾದಿ ಕಾಳಗ ಹಾಗೂ ಕುಶಲವರ ಕಾಳಗಗಳಾಗಿವೆ. ಮಹಾಭಾರತಕ್ಕೆ ಸಂಬಂಧಿಸಿದಂತೆ ಆತ ಬರೆದ ಐರಾವತ ಪ್ರಸಂಗವು ೫೬೦ ಪದ್ಯಗಳಿದ್ದು ಅತಿದೊಡ್ಡ ಪ್ರಸಂಗವಾಗಿದೆ. ಇನ್ನು ಭಾಗವತಕ್ಕೆ ಸಂಬಂಧಿಸಿದಂತೆ ಆತ 'ಕೃಷ್ಣಚರಿತೆ' ಎಂಬ ಪ್ರಸಂಗವನ್ನು ರಚಿಸಿದ್ದಾನೆ. ತಾಳ್ತಜೆ ಕೃಷ್ಣಭಟ್ಟರು (ಮಣಿಹಾರ, ಪುಟಸಂಖ್ಯೆ–೭) ರಾಮಾಯಣಕ್ಕೆ ಸಂಬಂಧಿಸಿದಂತೆ 'ಅಂಗದ ಸಂಧಾನವೇ' ಪಾರ್ತಿಸುಬ್ಬನ ಕೊನೆಯ ಪ್ರಸಂಗ ಎಂದು ಹೇಳುತ್ತಾ, ಪ್ರಸಂಗದಲ್ಲಿ ಬಂದಿರುವ "ಅಂತು ಸಂಧಿ....ಕ್ಕಂ ಪದ....ಕ್ಕೆ ಮಂಗಳ ಮಹಾ" ಎಂದೂ "ಕುಶಲವರು ಕೇಳಿ............ ಉಂಗುರು ಕೊಟ್ಟಾಯ್ತು" ಎಂಬಲ್ಲಿಗೆ ಸಂಧಿ ಪರಿಸಮಾಪ್ತಿ ಎಂದು ಬರೆದಿದ್ದಾನೆ. ಅಂಗದ ಸಂಧಾನ ವಿಫಲವಾದೊಡನೆ ಮಹಾಯುದ್ಧವೇ ನಡೆಯುತ್ತದೆ ಮತ್ತು ಕೆಲವು ಪದ್ಯಗಳನ್ನು ಬರೆದು ಕಥೆ ಸಮಾಪ್ತಿ ಮಾಡಿ ರಾಮನ ಅಯೋಧ್ಯಾಗಮನ ಪಟ್ಟಾಭಿಷೇಕಗಳ ವಿವರಕ್ಕೆ ಬರುತ್ತಾನೆ ಎಂದು ಹೇಳುವ ಮೂಲಕ ತಮ್ಮ ಮಾತನ್ನು ಸಮರ್ಥಿಸಿಕೊಳ್ಳುತ್ತಾರೆ. ಇದೇ ಅವರು ತಮ್ಮ ನಿಲುವಿಗೆ ನೀಡುವ ಸಾಕ್ಷಿಯಾಗಿದೆ. ಆದರೆ ಕೆಲವೊಂದು ವಿದ್ವಾಂಸರು ಕುಂಭಕರ್ಣಾದಿಕಾಳಗ ಆತನದ್ದೇ 'ರಾಮನಾಟ್ಟಂ'ನಲ್ಲಿ ಬಳಕೆಯಲ್ಲಿರುವ ಎಂಟು ಪ್ರಸಂಗಗಳನ್ನು ಕನ್ನಡದಲ್ಲಿ ಆತ ರಚಿಸಿದ್ದಾನೆ ಎನ್ನುತ್ತಾರೆ. 'ರಾಮನಾಟ್ಟಂ'ನಲ್ಲಿ ರಾವಣವಧೆ ಇಲ್ಲ. ಅದೇ ರೀತಿ ಪಾರ್ತಿಸುಬ್ಬ ಕೂಡ ಕನ್ನಡದಲ್ಲಿ ಅದನ್ನು ಬರೆದಿಲ್ಲ. ಇದು ಗಮನಿಸಬೇಕಾದ ಅಂಶವಾಗಿದೆ ಎಂಬುದು ಕೆಲವರ ವಾದವಾಗಿದೆ. ಇಂತವರು 'ರಾಮನಾಟ್ಟಂ'ನಲ್ಲಿ ಬರುವ ಅನೇಕ ಪದ, ಪದ್ಯ ವಿವರಗಳು ಪಾರ್ತಿಸುಬ್ಬನ ಪ್ರಸಂಗದಲ್ಲಿ ಪ್ರತಿಫಲನಗೊಂಡಿರುವುದನ್ನು ತಮ್ಮ ಮಾತಿಗೆ ಸಾಕ್ಷಿಯಾಗಿ ಕೊಡುತ್ತಾರೆ.

ವಸ್ತುದೃಷ್ಟಿಯಿಂದ ರಾಮಾಯಣದ ಎಂಟು ಪ್ರಸಂಗಗಳು ರಾಮಾಯಣದ ಕತೆಯನ್ನು ಹೇಳುತ್ತವೆ. "ಪುತ್ರಕಾಮೇಷ್ಠಿ ಹಾಗೂ ಸೀತಾಕಲ್ಯಾಣ" ದಶರಥನು ದೇವಾಸುರೊಂದಿಗೆ ಯುದ್ಧಕ್ಕೆ ಹೊರಡುವಲ್ಲಿಂದ ಪ್ರಾರಂಭವಾಗಿ ಸೀತಾಕಲ್ಯಾಣ ನಡೆದು ಸಮಸ್ತರು ದಿಬ್ಬಣದೊಂದಿಗೆ ಅಯೋಧ್ಯೆಯನ್ನು ಪ್ರವೇಶಿಸುವುದರೊಂದಿಗೆ ಮುಕ್ತಾಯವಾಗುತ್ತದೆ. ಪಟ್ಟಾಭಿಷೇಕವು ಭರತ ಶತ್ರುಘ್ನರನ್ನು ಕೇಕೆಯ ರಾಜನ ಮಗನಾದ ಯಥಾಜಿತು ರಾಜಧಾನಿಗೆ ಕರೆದುಕೊಂಡು ಹೋಗುವುದರಲ್ಲಿಂದ ಪ್ರಾರಂಭವಾಗಿ ನಂದಿಗ್ರಾಮದಲ್ಲಿ ಭರತನು ಪಾದುಕೆ ಇರಿಸುವುದರೊಂದಿಗೆ ಮುಕ್ತಾಯವಾಗುತ್ತದೆ. ಪಂಚವಟಿ ವಾಲಿಸಂಹಾರದಲ್ಲಿ ಶೂರ್ಪನಖಾ ನಾಸಾಚ್ಛೇದ, ಖರಾಸುರ ವಧೆ, ಸೀತಾಪಹಾರ ಹಾಗೂ ವಾಲಿಸಂಹಾರದ ಕತೆಗಳು ಬಂದಿವೆ. ಚಿತ್ರಕೂಟದಿಂದ ರಾಮನು ಹೊರಟಲ್ಲಿಂದ ಪ್ರಾರಂಭವಾಗಿ ತಾರೆಯ ಪ್ರವಾಸಕ್ಕೆ ರಾಮನು ಕೊಡುವ ಸಾಂತ್ವನ ವಾಕ್ಯಗಳೊಂದಿಗೆ ಮುಕ್ತಾಯಗೊಳ್ಳುತ್ತದೆ. ಸೀತೆಯನ್ನು ಹುಡುಕಲು ಕಪಿಗಳು ಹೊರಡುವಲ್ಲಿಂದ

‘ಚೂಡಾಮಣಿ’ ಪ್ರಾರಂಭವಾಗಿ ರಾಮನಿಗೆ ಚೂಡಾಮಣಿಯನ್ನು ಒಪ್ಪಿಸುವವರೆಗೆ ಕತೆ ಇದೆ. ‘ಸೇತುಬಂಧನ’ದಲ್ಲಿ ರಾಮಸೇತು ನಿರ್ಮಾಣದಲ್ಲಿನ ಪರಿಪಾಟಲುಗಳ ವಿವರವಿದೆ. ‘ಅಂಗದ ಸಂಧಾನ’ದಲ್ಲಿ ರಾಮನೊಂದಿಗೆ ಕಪಿಸೇನೆ ಹೊರಟು ೨ನೇ ದಿನದ ಅಂತ್ಯದವರೆಗಿನ ಯುದ್ಧದ ಕತೆ ಇದೆ. ‘ಕುಂಭಕರ್ಣಕಾಳಗ’ವು ಮೂರನೆಯ ದಿನ ನಿದ್ದೆ ಮಾಡುತ್ತಿದ್ದ ಕುಂಭಕರ್ಣನನ್ನು ಎಬ್ಬಿಸುವಲ್ಲಿಂದ ಪ್ರಾರಂಭವಾಗಿ ಕುಂಭಕರ್ಣನ ವಧೆಯೊಂದಿಗೆ ಮುಕ್ತಾಯವಾಗುತ್ತದೆ. ‘ಕುಶಲವರ ಕಾಳಗ’ದಲ್ಲಿ ರಾಮನಿಗೆ ವಸಿಷ್ಠರು ಆಶೀರ್ವಾದ ನೀಡಿ ಮಕ್ಕಳಾಗುವರೆಂಬ ಭರವಸೆಯಿಂದ ಪ್ರಾರಂಭವಾಗಿ ವನವಿಹಾರದ ವಿಚಾರ ಬಂದು ರಾಮನು ನಿಜಪುರದಲ್ಲಿ ಅಶ್ವಮೇಧವನ್ನು ಪೂರೈಸಿದನೆಂಬಲ್ಲಿಗೆ ಮುಕ್ತಾಯವಾಗುತ್ತದೆ.

ವ್ಯಾಸರು ಧೃತರಾಷ್ಟ್ರನಿಗೆ ಗಜನೋಂಪಿಯ ಬಗ್ಗೆ ತಿಳಿಸಿಕೊಡುವಲ್ಲಿಂದ ‘ಐರಾವತ’ ಪ್ರಸಂಗವು ಪ್ರಾರಂಭವಾಗಿ ಕುಂತಿಯನ್ನು ಕರೆಯದೇ ವ್ರತಮಾಡಿರುವುದು, ಅದಕ್ಕಾಗಿ ವ್ಯಥೆಪಡುವ ಕುಂತಿ, ಅರ್ಜುನನು ಅಮರಾವತಿಯಿಂದ ಐರಾವತನನ್ನೇ ತರಿಸಲು ಮಾಡಿದ ಪ್ರಯತ್ನ, ಅಂತೆಯೇ ನಿಜವಾದ ಐರಾವತದೊಂದಿಗೆ ನಡೆಸಿದ ವ್ರತದ ಹಿರಿಮೆ ಎಲ್ಲಾ ಬಂದಿದೆ, ಪಾರ್ತಿಸುಬ್ಬನ ಪ್ರಸಂಗಗಳಲ್ಲೆಲ್ಲ ಇದು ಅತ್ಯಂತ ದೀರ್ಘವಾದ ಪ್ರಸಂಗವಾಗಿದೆ. ‘ಕೃಷ್ಣಚರಿತೆ’ಯಲ್ಲಿ ಕೃಷ್ಣನ ಬಾಲಲೀಲೆ ಮುಂದೆ ಆತ ಮಾಡಿದ ಲೀಲಾಮಾನುಷ ಕೃತ್ಯಗಳೆಲ್ಲ ವಿವರವಾಗಿ ಬಂದಿವೆ. ಪಾರ್ತಿಸುಬ್ಬನು ಈ ಪ್ರಸಂಗದಲ್ಲಿ ಭಾಗವತವನ್ನು ಅನುಸರಿಸಿದ್ದಾನೆ.

ಪಾರ್ತಿಸುಬ್ಬನ ರಚನೆ ಮೇಲ್ನೋಟಕ್ಕೆ ಸರಳವೆಂಬಂತೆ ಕಂಡರು, ಆಂತರ್ಯದಲ್ಲಿ ಸಾಮಾನ್ಯ ಜನರ ಜೀವನದ ಪ್ರತಿಬಿಂಬದಂತೆ ಚಿತ್ರಿತವಾಗಿದೆ. ‘ಸಾಹಿತ್ಯ ಜನಜೀವನದ ಪ್ರತಿಬಿಂಬ’ ಎಂಬ ಮಾತನ್ನು ಅವನ ಪ್ರಸಂಗಗಳು ಸಾಬೀತುಗೊಳಿಸುತ್ತದೆ. ದೈವ ದೇವರುಗಳ ಮೇಲಿನ ನಂಬಿಕೆ, ಕೌಟುಂಬಿಕ ವ್ಯವಸ್ಥೆ, ಹಿರಿಕಿರಿಯರ ನಡುವಿರುವ ಸಂಬಂಧಗಳ ಚಿತ್ರಣಗಳೆಲ್ಲ ಇಲ್ಲಿ ಸಹಜವಾಗಿ ಬಂದಿವೆ. ದೂರದ ಅಯೋಧ್ಯೆಯಲ್ಲಿ ನಡೆದ ಕತೆ ಇದು ಅಲ್ಲ! ನಮ್ಮ ಊರಿನ ಯಾವುದೋ ಕತೆಯನ್ನು ಆತನು ಹೇಳುತ್ತಿದ್ದಾನೆ ಎಂದು ಅನ್ನಿಸುತ್ತದೆ. ‘ರಾಮಪಟ್ಟಾಭಿಷೇಕ’ದಲ್ಲಿ ರಾಮನು ‘ತನ್ನಯ ಮನೆಯ ದೇವರುಗಳನ್ನು ಬೇಡಿಕೊಂಡು, ಗುರುಹಿರಿಯರ ಕಾಲಿಗೆ ನಮಸ್ಕರಿಸಿ ಪಟ್ಟ ಏರಲು ಸಿದ್ಧನಾಗುತ್ತನೆ. ‘ಸೇತುಬಂಧನ’ದಲ್ಲಿ ಕಪಿಗಳು ಸಮುದ್ರಕ್ಕೆ ಕಲ್ಲುಗಳನ್ನು ತಂದು ಹಾಕಿದಂತೆಲ್ಲಾ ಅಲ್ಲಿರುವ ಮೀನುಗಳು ಅವುಗಳನ್ನು ನುಂಗಿ ಹಾಕುತ್ತಿರುತ್ತವೆ. ಹಿರಿಯರನ್ನು ಕೇಳಿದಾಗ ಕಪಿಗಳಿಗೆ ತಾವು ಮಾಡಿದ ತಪ್ಪಿನ ಅರಿವಾಗುತ್ತದೆ. ಮುಂದೆ ನಳನು ರಾಮನೊಂದಿಗೆ ಸೇರಿ ವಿಘ್ನನಿವಾರಕನಾದ ‘ಹೇರಂಬ’ನ ಪ್ರಾರ್ಥನೆ ಮಾಡುತ್ತಾನೆ.

**"ಸಕಲ ವಿಘ್ನಗಳೆಲ್ಲಾ ಪರಿಹರಿಸಯ್ಯ ಮೂಷಕರೂಢ ನೀನೇ ಎಂದು**
**ಭಕುತಿಯಿಂದೆರಗಿ ಬೇಡುವೆವು ನೀರೊಳಗೆ ಕಂಟಕ ಬಾರದಂತೆ ಕಾಯೋ॥**

(ಸೇತುಬಂಧನ ಪುಟ ೧೩, ಪಾವಂಜೆ ಗುರುರಾವ್ & ಸನ್ಸ್)

ಗಣೇಶನ ಪ್ರಾರ್ಥನೆಯ ನಂತರ ನಿರ್ವಿಘ್ನವಾಗಿ ಸೇತುವೆಯ ಕಾರ್ಯ ನಡೆಯುತ್ತದೆ.

ಪಟ್ಟಾಭಿಷೇಕ ಪ್ರಸಂಗದಲ್ಲಿ ರಾಮನಿಗೆ ತಾನು ಕಾಡಿಗೆ ಹೋಗುವ ಸುದ್ದಿ ತಿಳಿದರೆ ಹೆಂಡತಿ ನೊಂದುಕೊಳ್ಳುತ್ತಾಳೆ ಎಂಬ ಯೋಚನೆ. ಸೀತೆಗೆ ಕೂಡ ಗಂಡನ ಬಗ್ಗೆ ಅಷ್ಟೇ ಪ್ರೀತಿ. ಕವಿ ಇಲ್ಲಿ ಅವಳ ಮನದ ಇಂಗಿತವನ್ನು ಸಾಮಾನ್ಯರಂತೆ ಚಿತ್ರಿಸಿದ್ದಾನೆ. ಆಕೆಯು ಸಾಮಾನ್ಯ ಹೆಂಗಸಿನಂತೆ "ವಂಚಿಸಿ ಕಾಡಿಗೆ ಹೋದರೆ ವಿಷ ಕುಡಿದು ಸಾಯುವುದಾಗಿ ರಾಮನನ್ನು ಹೆದರಿಸುತ್ತಾಳೆ. ಇಲ್ಲೆಲ್ಲ ಶ್ರೀರಾಮ ಸೀತೆಯರು ನಮ್ಮ ಜನರ ಪ್ರತಿನಿಧಿ ಎಂಬಂತೆ ಇದ್ದಾರೆ. ಜನಸಾಮಾನ್ಯರ ನಂಬಿಕೆ, ನಡೆವಳಿಕೆಗಳು ಅರಮನೆಯಲ್ಲಿ ಪಾರ್ತಿಸುಬ್ಬನಿಂದಾಗಿ ಕಾಣಿಸಿಕೊಳ್ಳುತ್ತವೆ.

ಪಾರ್ತಿಸುಬ್ಬನ 'ಐರಾವತ'ದ ಒಂದು ಪದ್ಯದಲ್ಲಿ ಕರಾವಳಿಯ ದೈವದೇವರುಗಳ ನಂಬಿಕೆಯ ಸಜೀವ ಚಿತ್ರಣವಿದೆ. ಕುಂತಿಗೆ ಗಾಂಧಾರಿಯಿಂದ ಐರಾವತ ನೋಂಪಿಗೆ ಕರೆಬರುವುದಿಲ್ಲ. ತನ್ನನ್ನು ಅವಗಣನೆ ಮಾಡಿದ್ದಕ್ಕೆ ದುಃಖಿತಳಾಗುತ್ತಾಳೆ. ಹೀಗೆ ದುಃಖದಿಂದ ಪರಿತಪಿಸುತ್ತಿರುವ ಅವಳನ್ನು ನೋಡಿದ ಮಕ್ಕಳಾದ ಪಾಂಡವರು ಈ ಕೆಳಗಿನ ಪ್ರಶ್ನೆಗಳನ್ನು ಕೇಳುತ್ತಾರೆ.

**ನಾಡಿನ ಭೂತಗಳು ನಿಮ್ಮನು ಸೋಕಿ**
**ಪೀಡಿಸುತ್ತೈದವೇನಮ್ಮ ।**
**ಮೂಢ ಬೊಮ್ಮ ರಕ್ಕಸಗೆ ಹರಕೆಯಕೊಡದೆ**
**ಕಾಡುತ್ತಲಿಹುದೇನಮ್ಮ ॥**
**ದಾಯಾದಿಯರ್ ನಮ್ಮ ಸೈರದೆ ಮಂತ್ರ**
**ಮಾಯ ಮಾಡಿದರೋ ।**
**ಪ್ರಿಯದಿ ಮನೆದೇವರು ಮನದಿನೊಂದು**
**ಕಾಯವ ದಣಿಸುವರೋ॥**

(ಐರಾವತ ಪುಟ–೭, ಪಾವಂಜೆ ಗುರುರಾವ್ & ಸನ್ಸ್)

ಮೊದಲಿಗೆ ಭೂತಗಳ ಕಾಟ, ನಂತರ ಬ್ರಹ್ಮರಾಕ್ಷಸ (ದೈವಗಳು)ರ ಹರಕೆ, ಮುಂದೆ ದಾಯಾದಿಗಳ ಮಾಟ ಮಂತ್ರ ಕೊನೆಯಲ್ಲಿ ಮನೆದೇವರ ಮುನಿಸು ಇಲ್ಲಿ ಬರುತ್ತದೆ.

ಇದು ಕರಾವಳಿ ಪ್ರದೇಶದ ಜನತೆ ಸಂಕಷ್ಟಗಳು ಬಂದಾಗ ಯೋಜಿಸುವ ಪರಿಯೇ ಆಗಿದೆ. ಇದೇ ಬಗೆಯ ಚಿತ್ರಣವನ್ನು ಮಲೆನಾಡಿನ ಕುರಿತು ಪ್ರಸಿದ್ಧ ಕವಿ ಕುವೆಂಪುರವರು ತಮ್ಮ 'ಮಲೆನಾಡಿನ ಚಿತ್ರಗಳು' ಎಂಬ ಸಂಕಲನದ 'ಅಣ್ಣಪ್ಪನ ರೇಷ್ಮೆ ಕಾಯಿಲೆ' ಎಂಬ ಪ್ರಬಂಧದಲ್ಲಿ ರೋಗ ಬಂದಾಗ ಅಲ್ಲಿನ ಜನತೆ ನಡೆದುಕೊಳ್ಳುವ ಬಗೆಯ ಚಿತ್ರಣವನ್ನು ನೀಡುತ್ತಾರೆ.

ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ಜನಪದದ ಸೊಗಡು ಎದ್ದು ಕಾಣುವುದು, ಆತನು ಬಳಸುವ, ಗಾದೆಮಾತುಗಳಲ್ಲಿ, ನುಡಿಕಟ್ಟುಗಳಲ್ಲಿ, ಪ್ರಾದೇಶಿಕ ಶಬ್ದಭಂಡಾರಗಳಲ್ಲಿ ಯಕ್ಷಗಾನ ಕವಿಗಳು 'ಸಾಮಾನ್ಯರ' ಕವಿಗಳು. ಜನಸಾಮಾನ್ಯರ ಆಗುಹೋಗುಗಳನ್ನು ಬದುಕಿನ ಬಳಕೆಯ ನುಡಿಕಟ್ಟುಗಳ ಆಂತರ್ಯವನ್ನು ಬಲ್ಲವರು. ಆದ್ದರಿಂದ ಇಂತಹದ್ದು ಬಂದಾಗ ಪ್ರಸಂಗದ ಪ್ರದರ್ಶನ ಪ್ರೇಕ್ಷಕರನ್ನು ಮುಟ್ಟುತ್ತದೆ, ತಟ್ಟುತ್ತದೆ. ಪಾರ್ತಿಸುಬ್ಬನಂತೂ ಇಂತಹ ವಿಚಾರಗಳಲ್ಲಿ ಯಕ್ಷಗಾನ ಕವಿಗಳಲ್ಲೆಲ್ಲ ಮುಕುಟಮಣಿ. ಅವನು ಬಳಸಿದ ಅಸಂಖ್ಯ ನುಡಿಕಟ್ಟು, ಗಾದೆಮಾತುಗಳು ಹಾಗೂ ಸ್ಥಳೀಯ ಶಬ್ದಗಳನ್ನು ಕೆಳಗೆ ಗಮನಿಸಬಹುದು.

೧. ಬದನೆಕಾಯಿ ಬ್ರಹ್ಮಾಂಡವೆಂದ ಹಾಗೆ
೨. ಪನ್ನಂಗ ನಿಭವೇಣಿ ಸೊಬಗಿನ ಸಾಂಬ್ರಾಣಿ
೩. ಬರಿಗುಲ್ಲು ನಿದ್ದೆಗೇಡು
೪. ಸಕ್ಕರೆಯಕಟ್ಟು ಕಾಸರಕ್ಕನಾಯಿತು
೫. ಬೀಸಿದ ಕೈ ತಪ್ಪಿದರೆ ಸಾಸಿರ ಕಾಲ
೬. ಕಳವು ಹಾದರವು ಮುದ್ದಲ್ಲ
೭. ಸಾರಿ ಕೊಂದರೆ ಪಾಪವಿಲ್ಲ
೮. ಘಾತಕಿ (ಪುತ್ರಕಾಮೇಷ್ಠಿ)
೯. ಅರಸುಬಲ್ಲಾಳ (ಚೂಡಾಮಣಿ)
೧೦.ದಟ್ಟಚಲ್ಲಣ (ಪುತ್ರಕಾಮೇಷ್ಠಿ)
೧೧.ನೆಲೆಯಾರ ಮಾತಾಡು (ಅಂಗದ ಸಂಧಾನ)
೧೨.ಚಾಡಿಯಸೀಗೆ (ಪಟ್ಟಾಭಿಷೇಕ೦
೧೩.ಗೋಟರಾಯ (ಸೀತಾ ಸ್ವಯಂವರ)
೧೪.ಒಕ್ಕಲೊಂದುಳಿಯದೆ (ಚೂಡಾಮಣಿ೦

ಇತ್ಯಾದಿಗಳು ಒಂದು ಪ್ರದೇಶದ ವಿಶಿಷ್ಟತೆ ಅರಿಯಲು ಇವೆಲ್ಲವು ಸಹಕಾರಿ. ಆತನ ಪ್ರಸಂಗಗಳಲ್ಲಿ ವಿಧಿ, ಹಣೆಬರಹ, ದೈವಭಕ್ತಿಯ ಚಿತ್ರಣ, ಶಕುನಗಳ ಕುರಿತ ವಿವರಣೆ, ಭೂತಗಳ ಕಟ್ಟುಪಾಡುಗಳ ಕುರಿತ ವಿಚಾರಗಳು ಬರುತ್ತವೆ.

ಪ್ರಸಂಗದಲ್ಲಿ ಬರುವ ಹಾಡುಗಳು ಗುಣಾತ್ಮಕವಾಗಿದ್ದಷ್ಟು ಪ್ರಸಂಗದ ಮೌಲ್ಯ ಹೆಚ್ಚುತ್ತದೆ. ಭಾವಾಭಿವ್ಯಕ್ತಿಗೆ ಅವಕಾಶ, ಪ್ರದರ್ಶನಕ್ಕೆ ಕಳೆಗಟ್ಟುವ ಅಂಶಗಳನ್ನು ತರುವುದು, ನರ್ತನಕ್ಕೆ ಎಡೆಮಾಡಿ ಕೊಡುವುದು ಇವೆಲ್ಲವು ಹಾಡುಗಳ ಗುಣಾತ್ಮಕ ಅಂಶಗಳಾಗಿವೆ. ಅವು ಸರಳವಾಗಿದ್ದಂತೆ ಕಾಣುತ್ತವೆ ಆದರೆ ಮಾಡುವ ಪ್ರಭಾವ ಹಿರಿದಾಗಿರುತ್ತದೆ. 'ಪಂಚವಟಿ'ಯ ಕೆಳಗಿನ ಪದ್ಯವಂತು ಯಕ್ಷಗಾನ ಸಾಹಿತ್ಯದ ಮೊದಲ ಶ್ರೇಣಿಯಲ್ಲಿ ನಿಲ್ಲುವ, ಚಿರಕಾಲ ಉಳಿಯುವಂತಹ ಪದ್ಯವಾಗಿದೆ.

**"ನೋಡಿ ನಿರ್ಮಲ ಜಲ ಸಮೀಪದಿ । ಮಾಡಿಕೊಂಡರು ಪರ್ಣಶಾಲೆಯ**
**ರೂಢಿಪಾಲರು ಪಂಚವಟಿಯ ಕಾಡಿನೊಳಗೆ ॥**

(ಪಂಚವಟಿ ಪುಟ–೬೫, ಪಾರ್ತಿಸುಬ್ಬ ಕವಿ ಯಕ್ಷಗಾನ ಪ್ರಸಂಗಗಳು,
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಹಾಡಲು ಒಗ್ಗುವಂತಹ ಪದ್ಯ ಇದಾಗಿದ್ದು, ಈ ರಚನೆ ತನ್ನ ಸರಳತೆ ಹಾಗೂ ಸುಭಗತೆಯಿಂದ ಜನಮಾನಸದಲ್ಲಿ ಚಿರಸ್ಥಾಯಿಯಾಗಿದೆ. ಧ್ವನಿ ಸಿದ್ಧಾಂತಕ್ಕೆ ಇದು ವಿರುದ್ಧವಾದರೂ ನಮ್ಮ ಯಕ್ಷಗಾನ ಸಾಹಿತ್ಯವನ್ನು ಅಳೆಯಬೇಕಾದರೆ ಇಂತಹ ಮಾದರಿಗಳೇ ಮಾಪನಗಳಾಗುತ್ತವೆ. ಇದೇ ಬಗೆಯ ಇನ್ನೊಂದು ರಚನೆ 'ಪಂಚವಟಿ'ಯಲ್ಲಿ ಬರುವ ಕೆಳಗಿನ ಪದ್ಯದಲ್ಲಿ ಪಾರ್ತಿಸುಬ್ಬನ ಚಿತ್ರಕಶಕ್ತಿಯನ್ನು ಬಿಂಬಿಸುತ್ತದೆ. ಸೀತೆಯನ್ನು ಕಳೆದುಕೊಂಡ ರಾಮಚಂದ್ರ ಸೀತೆಗಾಗಿ ಪರಿತಪಿಸುವ ಬಗೆ ಹೀಗಿದೆ:

**ಪೊಡವಿಗಿಡ ಮರಕಲ್ಲು ನೋಡಿದರೆ ಅರಿಸಿನದ**
**ಪುಡಿಯಂತೆ ತೋರುತಿದೆ ತಮ್ಮಾ ।**
**ಮಡದಿ ಜಾನಕಿ ಎಂಬ ರತುನವನು ಕಾಣ**
**ದಡಿಯಡಲಾರೆ ನಯ್ಯಯ್ಯಾ ತಮ್ಮಾ ॥**

**ಏಳು ಜನ್ಮಾಂತರಕು ತಪವಗೈದರೂ ಇಂಥ**
**ಬಾಲೆ ಕೈಸೇರುವಳೆ ತಮ್ಮಾ ।**
**ಮೇಲು ಕೀಳೊಂದನರಿಯದ ಸತಿಯ ದುರ್ನುಡಿಯ**
**ಕೇಳಿ ನೀ ಬರಬಹುದೆ ತಮ್ಮಾ ॥**

(ಪಂಚವಟಿ ಪುಟ–೮೭, ಪಾರ್ತಿಸುಬ್ಬ ಕವಿ ಯಕ್ಷಗಾನ ಪ್ರಸಂಗಗಳು,
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಆಘಾತ ಬಂದು ಕಣ್ಣಿಗೆ ಕತ್ತಲೆ ಕವಿದಾಗ ಎಲ್ಲವು ಅರಸಿನ ಹೊಡೆದಂತೆ ಕಾಣಿಸುತ್ತದೆ ಎಂಬ ಸಾಮಾನ್ಯರ ಭಾವ ಇಲ್ಲ ಸಜೀವವಾಗಿ ಬಂದಿದೆ.

ಯಾವುದೇ ಪ್ರಸಂಗ ಯಶಸ್ವಿಯಾಗುವುದು ಸಂಭಾಷಣೆಗೆ, ಸಂವಾದಕ್ಕೆ ಕವಿ ಹೇಗೆ ಅವಕಾಶಗಳನ್ನು ಕಲ್ಪಿಸುತ್ತಾನೆ ಎಂಬುದರಲ್ಲಿ. ಪ್ರತಿಪ್ರಸಂಗದಲ್ಲೂ ಕವಿಯಾದವನು ಒಂದು ರಸಸ್ಯಂದಿಯನ್ನು, ನಿರ್ಮಿಸಿಕೊಡುತ್ತಾನೆ. ಆ ರಸಘಟ್ಟಗಳೇ ಪ್ರಸಂಗಗಳ ಯಶಸ್ಸಿನ ಮಾನದಂಡವಾಗಿರುತ್ತದೆ. ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ಇಂತಹ ರಸಸ್ಥಾನಗಳ ಸೃಷ್ಟಿ ಸಾಕಷ್ಟಿವೆ. ಇದಕ್ಕೆ ಉದಾಹರಣೆಯಾಗಿ ರಾಮ–ವಾಲಿಯರ ಸಂವಾದವನ್ನು ಗಮನಿಸಬಹುದು.

**ಜಾಣನಹುದಹುದೋ । ಸಂಗರಕತಿ ಪ್ರಾಣನಸಹುದಹುದೋ**
**ಕ್ಷೋಣಿಯೊಳ್ ನಿನಗೆಣೆಗಾಣೆ ಪರಾಕ್ರಮಿ ॥ಜಾಣನಹುದಹುದೋ ॥**
**ಇನವಂಶದರ ಸುಗುಳೊಳಗೆ ಹಿಂದೆ ಜನಿಸಿದವರು ನಿನ್ನ ಕೆಳಗೆ**
**ಘನಚೋರತನದ ಶಿಖಂಡಿ ವಿದ್ಯೆಯನೆಷ್ಟು ॥**
**ದಿನ ಸಾಧಿಸಿದೆಯೋ ನೀನು ಲಂಡಿಗಳದು ।**
**ರ್ಗಣವ ಕೈಕೊಂಡೆಯೇನು॥ ನಿನ್ನಂಥಕು । ಜನರಿಲ್ಲ ಸಾಕ್ಷಿಗಿನ್ನು ರಾಘವ**
**ಬಲುಜಾಣನಹುದಹುದೋ ॥**

(ಪಂಚವಟಿವಾಲಿ ಪುಟ–೧೦೨, ಪಾರ್ತಿಸುಬ್ಬ ಕವಿ ಯಕ್ಷಗಾನ ಪ್ರಸಂಗಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಇದಕ್ಕೆ ರಾಮಕೊಡುವ ಉತ್ತರವು ಅಷ್ಟೇ ಸಶಕ್ತವಾಗಿದೆ.

**ವಾನರಾಧಿಪ ಕೇಳೆನ್ನ ಮಾತ**
**ನೀನೆನ್ನ ಜರೆಯುವುದೇಕಿಂದ್ರಜಾತ ॥**

(ಪಂಚವಟಿ ವಾಲಿ–ಸುಗ್ರೀವ ಕಾಳಗ, ಪುಟ–೧೦೪, ಪಾರ್ತಿಸುಬ್ಬ ಕವಿ ಯಕ್ಷಗಾನ ಪ್ರಸಂಗಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಈ ಮೇಲಿನ ಪದ್ಯಗಳಲ್ಲಿ ಅರ್ಥ ವಿಸ್ತರಣೆಗೆ ವಿಪುಲ ಅವಕಾಶವಿದೆ. ಅರ್ಥ ಪ್ರಸವಕ್ಷಮತೆಯಿಂದಾಗಿ ಈ ಭಾಗ ತಾಳಮದ್ದಲೆಯಲ್ಲಿ ಯಶಸ್ವಿಯಾಗಿದೆ. ಸಾಕಷ್ಟು ಜನ ಅರ್ಥಧಾರಿಗಳು ಈ ಭಾಗವನ್ನು ನಾನಾರೀತಿಯಲ್ಲಿ ವ್ಯಾಖ್ಯಾನಿಸಿದ್ದು ನಮ್ಮ ನಾಡಿನ ಸಂಸ್ಕೃತಿಯ ಸಂಕಥನದಲ್ಲಿ ಸೇರಿಹೋಗಿದೆ. ಅನೇಕ ವೈಚಾರಿಕ ಹೊಳಹುಗಳಿಗೆ ಈ ಪದ್ಯಗಳು ಕಾರಣೀಭೂತವಾಗಿವೆ. ಈ ಬಗೆಯ ಸಂವಾದ ಸೃಷ್ಟಿ ಪ್ರಸಂಗ ಸಾಹಿತ್ಯದ

ಒಂದು ಮಾನದಂಡವಾಗುತದೆ. ಇದೂ ಒಂದು ಬಗೆಯ ಒರೆಗಲ್ಲು ಇದ್ದಂತೆ. ಪಾರ್ತಿಸುಬ್ಬ ಇಂತಹ 'ಸಂವಾದಸೃಷ್ಟಿ'ಗೆ ವಿಪುಲ ಅವಕಾಶ ಕೊಟ್ಟಿದ್ದರಿಂದಲೇ ಆತ ಜನಪ್ರಿಯನಾಗಿದ್ದಾನೆ. ಆದ್ದರಿಂದಲೇ ತೆಂಕು, ಬಡಗು, ಬಡಾಬಡಗುತಿಟ್ಟುಗಳಲ್ಲಿ ಮಾತ್ರವಲ್ಲದೆ ಮಲೆನಾಡಿನ ಯಕ್ಷಗಾನ ಮೇಳಗಳಲ್ಲಿ, ಗೊಂಬೆಯಾಟ ಮೇಳಗಳಲ್ಲಿ ಅಷ್ಟೇಕೆ ಘಟ್ಟದಕೋರೆ ಮೇಳಗಳಲ್ಲಿ, ಮೂಡಲಪಾಯದ ಮೇಳಗಳಲ್ಲಿ ಇವನ ಪ್ರಸಂಗಗಳು ಕಳೆದ ಮುನ್ನೂರು ವರ್ಷಗಳಿಂದ ಪ್ರದರ್ಶನಗೊಳ್ಳುತ್ತಾ ಬರುತ್ತಿವೆ. ರಾಮ–ಶೂರ್ಪನಖಿ, ಶೂರ್ಪನಖಿ–ಲಕ್ಷ್ಮಣ, ದಶರಥ ಕೈಕೆಯಿ, ರಾಮ–ಕೈಕೇಯಿ, ರಾವಣ–ಶೂರ್ಪನಖಿ, ರಾವಣ–ಮಂಡೋದರಿ, ಸುಗ್ರೀವ–ಲಕ್ಷ್ಮಣ, ತಾರೆ–ಲಕ್ಷ್ಮಣ ಮುಂತಾದ ಸಂವಾದಗಳು ಅರ್ಥ ಪ್ರಸವಕ್ಷಮತೆಯಿಂದಾಗಿ ಕ್ಲಾಸಿಕಲ್ ಆಗಿವೆ, ರಸಿಕರ ಮನಗೆದ್ದಿವೆ. ಹಾಡಿನ ಮೂಲಕ ಜನಮನಕ್ಕೆ ಮುದ ನೀಡಿದಂತೆ, ಸಾಹಿತ್ಯ ದೃಷ್ಟಿಯಿಂದ ಅವಲೋಕಿಸಿದಾಗ ಮಾನವ ಸ್ವಭಾವಗಳ ಸೂಕ್ಷ್ಮಚಿತ್ರಣವೂ ಇಲ್ಲಿ ದೊರೆಯುತ್ತದೆ. ಆಲಂಕಾರಿಕವಾಗಿ ಬಳಸುವ ಭಾಷೆಯಿಂದ ಪ್ರಸಂಗದ ಕಾವ್ಯಸೌಂದರ್ಯ ಇಮ್ಮಡಿಯಾಗಿದೆ.

ಸಾಂಪ್ರದಾಯಿಕ ಕಲೆಗಳು ಸಂಸ್ಕೃತಿಯ ಜೀವನಾಡಿ. ಅದಕ್ಕೆ ಪೂರಕವಾಗುವ ಸಾಹಿತ್ಯ ಸಂಸ್ಕೃತಿಯನ್ನು ಸಂವರ್ಧನೆ ಮಾಡುತ್ತದೆ. ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ಈ ಸಂಸ್ಕೃತಿಯನ್ನು ಸಂವರ್ಧಿಸುವಂತಹ ಪದ್ಯಗಳು ಸಾಕಷ್ಟಿವೆ. ಪಟ್ಟಾಭಿಷೇಕದಲ್ಲಿ ರಾಮನು ತಾಯಿ ಕೌಸಲ್ಯೆಯನ್ನು ಸಮಾಧಾನಗೊಳಿಸುತ್ತಾ ಆಡುವ ಮಾತುಗಳು ಅಚ್ಚಗನ್ನಡ ನುಡಿಗಟ್ಟುಗಳಿಂದ ಕೂಡಿಕೊಂಡಿದ್ದು ಪಿತೃವಾಕ್ಯ ಪರಿಪಾಲನೆಯ ಹಿರಿಮೆಯನ್ನು ಸರಳವಾಗಿ ತಿಳಿಸಿಕೊಡುತ್ತದೆ.

**ಕಣ್ಣೀರಬುಧಿಯೊಳಗಳುವ ಜನನಿಯ ।**
**ಪುಣ್ಯಪುರುಷ ನೋಡುತ್ತಾ ।**
**ಬಣ್ಣಗಾರಿಕೆಯಲ್ಲ ತಾಯ್ ತಂದೆಯರ ಮಾತ ।**
**ನೂಳದುರಿಯಲಾಗದು ॥**

(ಶ್ರೀರಾಮ ಪಟ್ಟಾಭಿಷೇಕ ಪುಟ–೪೪, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಇದೇ ರೀತಿ ಶೋಕಗೊಂಡ ರಾಣಿಯರನ್ನು ವಸಿಷ್ಠನು ಸಮಾಧಾನಗೊಳಿಸುತ್ತ ಆಡುವ ಮಾತುಗಳು ಸರಳವಾಗಿದ್ದು ಸಾಮಾನ್ಯರು ಬದುಕಿಗೆ ಕೊಟ್ಟ ವ್ಯಾಖ್ಯಾನದ ಪಡಿಯಚ್ಚಿನಂತಿದೆ.

**ಗಾಳಿಸಿಡಿಲು ಮಳೆ ಹೊಯ್ಯಬೇಕೆಂದು ಕೈ**
**ತೋಳನೆತ್ತಿದರೆ ನಿಲ್ಲುವುದೇ**
**ಬಾಲಕರಿಲ್ಲದ ವೇಳೆಯೆಂದರೆ ಯಮ**
**ನಾಳುಗಳದನು ಕೇಳುವರೇ**
**ನೆಲೆಯಲ್ಲಿ ತನುವಿದೆ ಮಳೆಗಾಲದಲಿ ತುಂಬಿ**
**ದ್ಹೊಳೆಯಲ್ಲಿ ನೆರೆಪುಟ್ಟುವಂತೆ**
**ನಳಿನ ಸಂಭವ ಬರೆದಾದಿನ ಸಂದರೆ**
**ಉಳಿವರೇ ನಿಮಿಷ ಪ್ರಾಣಿಗಳು**

(ಶ್ರೀರಾಮ ಪಟ್ಟಾಭಿಷೇಕ ಪುಟ-೫೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಈ ಬಗೆಯ ರೂಢಿಗತ ವಿಚಾರಗಳನ್ನು ಕವಿ ಮಾರ್ಮಿಕವಾಗಿ ಅಲ್ಲಲ್ಲಿ ತರುವ ಮೂಲಕ ತನ್ನ ಕೃತಿ ಜನರ ನಡೆನುಡಿಗಳಿಗೆ ಹಿಡಿದ ಕನ್ನಡಿಯಾಗುವಂತೆ ನೋಡಿಕೊಂಡಿದ್ದಾನೆ.

ಮುಳಿಯ ತಿಮ್ಮಪ್ಪಯ್ಯನವರು ಪಾರ್ತಿಸುಬ್ಬನನ್ನು 'ನಾಡೋಜ' ಎಂದು ಕರೆದು ಗೌರವಿಸಿದ್ದಾರೆ. ಕವಿಹೃದಯ ಉಳ್ಳ ಆತ ಸೂಕ್ಷ್ಮಭಾವಗಳನ್ನು ನವುರಾಗಿ ಚಿತ್ರಿಸುತ್ತಾನೆ. ಆತನ ವರ್ಣನಾ ಶಕ್ತಿಯು ಅಸದೃಶವಾದದ್ದು. ಸಮುದ್ರದ ವರ್ಣನೆಯನ್ನು ಜಾಂಬವಂತನ ಮೂಲಕ ಹೀಗೆ ಹೇಳುತ್ತಾನೆ.

**ಕಂಡಿರೆ ನೀವು ಕಂಡಿರೇ**
**ಕಂಡಿರೆ ಸಮುದ್ರರಾಜ**
**ಕೆಂಡದಂತುಚ್ಚರಿಸುದು । ಕರೆಸಿ ಬೆರೆಸಿ ಕೊಂಡು ಕೊಟ್ಟಿ**
**ಮೊರೆವುದಾ ಭೋರ್ಗರೆವುದಾ ॥ಕಂಡಿರೆ॥**

**ಅಂಬರಕೆ ಹಾರಿ ಮಗುಚಿ**
**ಬಿಂಬಿಸುವುದು ಭಯವ**
**ನಿಂತು ನೊರೆಗಳಾ ಬಹತೆರೆಗಳಾ ॥**
**ಅಗಣಿತದ ಪರ್ವತಗಳ**
**ಸೊಗಸು ಹೀರಿ ಚರಿಪ ಮೀನು । ಹೊಳೆವುದಾ ಬಾಯಿ ಕಳೆವುದಾ ॥**

(ಉಂಗುರ ಸಂಧಿ ಪುಟ-೧೨೦, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಪಾರ್ತಿಸುಬ್ಬನು ಪಲ್ಲವಿ ಅನುಪಲ್ಲವಿಗಳ ಸಂರಚನೆಯಲ್ಲೂ ಪ್ರಯೋಗಶೀಲ ಎಂಬುದನ್ನು ವಸಂತ ಭಾರಧ್ವಾಜರು ಗುರುತಿಸಿದ್ದಾರೆ. ಅವನಲ್ಲಿ ಅನುಪದಗಳ ಬಳಕೆ ಸೊಗಸಾಗಿ ಬರುತ್ತದೆ. ಪಲ್ಲವಿ ಅನುಪಲ್ಲವಿಗಳ ಸಂರಚನೆಯಲ್ಲಿ ಆತ ಪ್ರಯೋಗಶೀಲ ಎಂಬುದಕ್ಕೆ 'ಕೃಷ್ಣಚರಿತೆ'ಯಲ್ಲಿನ ಪದ್ಯ ಒಂದನ್ನು ಗಮನಿಸಬಹುದು.

**ಕಾರೆಂಬ ಕತ್ತಲೆ ಕವಿಯಲು ದಶದಿಕ್ಕು**
**ಭೋರೆಂದು ಮಳೆ ಹೊಯ್ಯುತಿರುವಾಗ । ಶ್ವೇತ**
**ದ್ವಾರದೊಳಾಂಡಿಗೆ ಬೇಗ ಕಳಚಿ**
**ದಾರಿಯಾಯಿತು ಶೌರಿ ಬರುವಾಗ । ಕಾಣು**
**ತಿರುವಾಗ ಕಾವಲವರಾಗ ನಿದ್ರೆ**
**ಬಾರಿಸಲೆಚ್ಚರಿಲ್ಲದ ಯೋಗ । ಸೂತ್ರ**
**ಧಾರಿಯ ಮಹಿಮೆಯಿಂದಲಿಬೇಗ**

(ಕೃಷ್ಣ ಚರಿತೆ, ಪುಟ-೨೭೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.)

ಇದೇ ರೀತಿಯಲ್ಲಿ ಒಂದು ಪದ್ಯ ಇಪ್ಪತ್ತೈದು ಸಾಲುಗಳಷ್ಟು ದೀರ್ಘವಾದ ರಚನೆ ಇರುವುದನ್ನು ಕೂಡ ಅವರು ಗುರುತಿಸಿದ್ದಾರೆ. ಇದು ಸೀತಾದೇವಿಯಲ್ಲಿ ರಾವಣಗೋಗೆರೆಯುವ ಸಂದರ್ಭದಲ್ಲಿ ಬರುತ್ತದೆ (ಮಾತಾಡಬಾರದೇನೆ ಸೀತಾದೇವಿ । ಮಾತಾಡಬಾರದೇನೆ॥) ಅವರು ಇದನ್ನು ಕನ್ನಡದ ಅತೀ ದೀರ್ಘವಾದ ಪದ್ಯಬಂಧವೆಂದು ಊಹಿಸಿದ್ದಾರೆ.

ಮೊದಲೇ ತಿಳಿಸಿದಂತೆ ರಂಗ ಪ್ರದರ್ಶನವೇ ಪ್ರಸಂಗ ಸಾಹಿತ್ಯದ ನಿಕಷ. ರಂಗದಲ್ಲಿ ಮಿಂಚುವುದೇ ಗುರಿ. ಕವಿಯ ಉದ್ದೇಶವೂ ಅದೆ. ರಂಗಸ್ಥಳದಲ್ಲಿ ಮಿಂಚುವ ಪ್ರಸಂಗಗಳು ಕಾಲದ ಹಂಗಿಲ್ಲದೆ ಬದುಕಿ ಚಿರನೂತನವ, ಚಿರಚೇತನವೂ ಆಗಿರುತ್ತವೆ. ಪಾರ್ತಿಸುಬ್ಬನ ಪ್ರಸಂಗಗಳು ಈ ಕಾರಣಕ್ಕಾಗಿ ಸರ್ವಮಾನ್ಯವಾಗಿವೆ. ಪ್ರಸಂಗದಲ್ಲಿ ಹಾಸ್ಯ ಸನ್ನಿವೇಶದ ಸೃಷ್ಟಿಯಿಂದ ಪ್ರದರ್ಶನ ಕಳೆಕಟ್ಟುತ್ತದೆ. ಈ ಬಗೆಯ ಸೃಷ್ಟಿಯಲ್ಲಿ ಪಾರ್ತಿಸುಬ್ಬನು ಅದ್ವಿತೀಯ. ಹನುಮನಾಯಕ, ಚಾರಕ, ದೂತ, ಬೇಟೆಗಾರ, ಬೆಸ್ತ ಮುಂತಾದ ಪಾತ್ರಗಳ ಮೂಲಕ ಹಾಸ್ಯದ ಸೃಜನೆ ಇಲಿ ನಡೆಯುತ್ತದೆ. 'ಅಂಗದ ಸಂಧಾನ'ದಲ್ಲಿ ಅಂಗದನನ್ನು ನೋಡಿ ಲಂಕೆಯಲ್ಲಿರುವ ಜನತೆ ಹನುಮಂತ ಹಿಂದೆ ಮಾಡಿದ ಅವಾಂತರಗಳನ್ನು ನೆನೆದುಕೊಂಡು ಭಯಪಟ್ಟು ಓಡುತ್ತಿರುವ ವಿಚಾರವನ್ನು ಹಾಸ್ಯಮಯವಾಗಿ ಕೆಳಕಂಡಂತೆ ವರ್ಣಿಸಿದ್ದಾನೆ:

**ಸೀರೆಗಳಡಗಿಸಿದರೆಣ್ಣೆಯ ।**
**ದೂರದಲಿ ಬಚ್ಚಿಟ್ಟು ಬಂದರು**
**ನೀರ ಚಿಮ್ಮಿದ ರೊಲೆಗೆ ಹಿಂದಣ**
**ಮಾರಿಗಂಜಿ ॥**

**ಬೆದಬೆದರಿ ವಾನರನಬಾಲದ**
**ತುದಿಯನೀಕ್ಷಿಸಿ ಕಿವಿಯೊಳೇಕಾಂ ।**
**ತದಲಿ ಮಾತಾಡಿದರು ಕೆಲರಿದು ।**
**ಬದಲೆನುತಲಿ ॥**

**ಸಣ್ಣವರು ನೋಡಿದರೆ ಬಾಳೆಯ**
**ಹಣ್ಣುಗಳ ಕರಕರೆದು ಕೊಡುವರು**
**ಪುಣ್ಯವುಳ್ಳದ್ದೆನುತ ಕೆಲವರು**
**ಮನ್ನಿಸೆವರು ॥**

(ಅಂಗದ ಸಂಧಾನ ಪುಟ–೧೭೭, ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಣೆ)

ಇಂತಹ ವರ್ಣನೆಗಳಲ್ಲೆ ಊರಿನಲ್ಲಿ ಮಂಗಗಳು ಬಂದಾಗ ಜನರು ಹೇಗೆ ವರ್ತಿಸುತ್ತಾರೆ ಎಂಬ ಸಜೀವ ಚಿತ್ರಣವಿದೆ. 'ಕುಶಲವರ ಕಾಳಗ'ದಲ್ಲಿ ಪಾರ್ತಿಸುಬ್ಬನು ಲಕ್ಷ್ಮೀಶನ ಜೈಮಿನಿ ಭಾರತದಿಂದ ಉಪಕೃತನಾದಂತೆ ಕಾಣುತ್ತದೆ. ಕತೆಯ ವಿಸ್ತಾರದಲ್ಲಿ ವರ್ಣನೆಗಳಲ್ಲಿ, ಹಾಸ್ಯದ ಸನ್ನಿವೇಶ ಸೃಷ್ಟಿಯಲ್ಲಿ ಇದನ್ನು ಗಮನಿಸಬಹುದು. ಅದೇ ರೀತಿ 'ಐರಾವತ'ವು ಕುಮಾರವ್ಯಾಸನು ರಚಿಸಿರಬಹುದೆಂದು ಕೆಲವರು ಅನುಮಾನಿಸಿರುವ ಕನ್ನಡದ 'ಐರಾವತ' ಎಂಬ ಕಿರುಕೃತಿಯನ್ನು ಆಧರಿಸಿದೆ. ರಾಮಾಯಣದ ೮ ಪ್ರಸಂಗಗಳು ಕೊಟ್ಟಾರಕ ಮಹಾರಾಜನ 'ರಾಮನಾಟ್ಟಂ' ಮಲೆಯಾಳಂ ಕೃತಿಯನ್ನು ಅನುಸರಿಸಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕುಕ್ಕಿಲ ಕೃಷ್ಣಭಟ್ಟರು ಈ ಕುರಿತು ಸಾಧಾರಣವಾದ ಚರ್ಚೆಯನ್ನು ಮಾಡಿದ್ದಾರೆ.

ಛಂದಶಾಸ್ತ್ರದ ಹಿನ್ನೆಲೆಯಲ್ಲಿ ಪಾರ್ತಿಸುಬ್ಬನ ಪ್ರಸಂಗಗಳನ್ನು ಅವಲೋಕಿಸಿರುವ ಯಕ್ಷಗಾನ ಕವಿ ಶ್ರೀ ಡಿ.ಎಸ್.ಶ್ರೀಧರ್ ಅವರು ಆತ ೧೮೮ ಮಟ್ಟುಗಳನ್ನು ಬಳಸಿದ್ದಾನೆ ಎಂಬ ಅಭಿಪ್ರಾಯಕ್ಕೆ ಬರುತ್ತಾರೆ. ಅವುಗಳಲ್ಲಿ ಕೆಲವು ಪುನರಾವರ್ತನೆಗೊಂಡಿರುವ ಸಾಧ್ಯತೆ ಇದೆ ಎಂದು ತಿಳಿಸುತ್ತಾರೆ. ಪಾರ್ತಿಸುಬ್ಬನ ಪ್ರಯೋಗಶೀಲತೆಯನ್ನು

ಗುರುತಿಸಿರುವ ಡಾ. ಕಬ್ಬಿನಾಲೆ ವಸಂತ ಭಾರದ್ವಾಜರು ಮಿಶ್ರಗತಿಯಲ್ಲಿ ಹೊಸ ಪ್ರಯತ್ನ ಮಾಡಿರುವುದನ್ನು 'ಕೃಷ್ಣಚರಿತೆ'ಯ ಕೆಳಗಿನ ಪದ್ಯದಲ್ಲಿ ಕಾಣಿಸುತ್ತಾರೆ.

**ಬಂದಳಾಗ ಪೂತನಿ । ಬಂದಳಾಗ ॥ಪ॥**
**ಮಂದಮತಿ ಕಂಸಾಖ್ಯನಾಜ್ಞೆಯೊ ।**
**ಳಂದು ಶಿಶುಗಳ ಕೊಂದು ಕೂಗುತ ॥ಅ.ಪ.॥**

**ಅಸುರಭಾವವ ಮರೆಸಿ ನಡುವಿನೊ । ಳೆಸೆವ ಸೀರೆಯನುಟ್ಟಳು ।**
**ಬಿಸಜಕೋರಕ ಕುಚಗಳೆದೆಗೊ । ಪ್ಪಿಸುವ ಕುಪ್ಪಸವ ತೊಟ್ಟಳು ॥**
**ನೊಸಲಿಗರಸಿನ ದಿವ್ಯಕಸ್ತುರಿ । ಎಸಳು ನಾಮವನಿಟ್ಟಳು ।**
ಕುಸುಮಶರನರಗಿಣಿಯ ಭಾವದೊ । ಳೊಸಗೆ ಮಿಗೆ ರಂಜಿಸುವ ಬೇಗದಿ

ಪಾರ್ತಿಸುಬ್ಬನ ಪದ್ಯಬಂಧಗಳನ್ನು ನೋಡಿದಾಗ ಅವುಗಳು ದಾಸಸಾಹಿತ್ಯದ ಪ್ರಸಿದ್ಧ ಬಂಧಗಳನ್ನೇ ಹೋಲುತ್ತವೆ. ವಿಶೇಷವಾದ ವಿಪುಲವಾದ, ಹೊಸಬಂಧಗಳೂ ಬಂದಿವೆ.

ಪಾರ್ತಿಸುಬ್ಬನ ಪ್ರಸಂಗಗಳು ಕರಾವಳಿ ಮಲೆನಾಡನ್ನು ದಾಟಿ ಬಯಲು ನಾಡಿನ ಘಟ್ಟದಕೋರೆ ಹಾಗೂ ಮೂಡಲಪಾಯಗಳಲ್ಲಿ ಬಂದಿರುವುದನ್ನು ಯಕ್ಷಗಾನ ಪ್ರಸಂಗಕಾರರು, ವಿದ್ವಾಂಸರೂ ಹಾಗೂ ಅರ್ಥಧಾರಿಗಳಾಗಿರುವ ಪ್ರೊ. ಎಂ.ಎ.ಹೆಗಡೆಯವರು ಗುರುತಿಸಿರುತ್ತಾರೆ. ಕುಕ್ಕಿಲರು ಪಾರ್ತಿಸುಬ್ಬನ ಕವಿತಾಶಕ್ತಿಯನ್ನು ತಮ್ಮ "ಪಾರ್ತಿಸುಬ್ಬನ ಯಕ್ಷಗಾನಗಳು" ಕೃತಿಯ ಪ್ರಸ್ತಾವನೆಯಲ್ಲಿ ಬಹುವಿಶದವಾಗಿ ವಿವರಿಸಿದ್ದಾರೆ. ಡಾ॥ ಕಾರಂತರು 'ಪಂಚವಟಿ'ಯ 'ಚಂದದಿಂದ ಬಂದಳಬ್ಬಲೋಚನೆ ರಾಮಚಂದ್ರನೆಂದ ಮಾತಿನ ಆನಂದವನ್ನೇ ನೆನೆಯುತಾಗ' ಎಂಬಲ್ಲಿನ ವಿಪ್ರಬಂಧ ಶೃಂಗಾರವನ್ನು ಮತ್ತು ಮುಂದೆ ಬರುವ ಶೂರ್ಪನಖಿಯ ಮಾನಸಿಕ ಹೊಯ್ದಾಟವನ್ನು, ಕಾತರವನ್ನು, ಕಾಮಾತುರತೆಯ ವಿಭ್ರಮವನ್ನು ಮೆಚ್ಚಿಕೊಂಡಿದ್ದಾರೆ. ಹೀಗೆ ವಿದ್ವಾಂಸರು, ವಿಮರ್ಶಕರು ಪಾರ್ತಿಸುಬ್ಬನ ಕವಿತಾಶಕ್ತಿಯನ್ನು ಗುರುತಿಸಿ ಆತನನ್ನು "ಯಕ್ಷಗಾನದ ಮಹಾಕವಿ" ಎಂದು ಕರೆದಿರುವುದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ.

* * *

# ಅಗ್ರಶಾಲವಾಸಿನಿ ಅನ್ನಪೂರ್ಣೆ

## (ಅಧ್ಯಕ್ಷರ ಭಾಷಣ)

– ಡಾ. ಕೆ.ಕಮಲಾಕ್ಷ

ತಮ್ಮ ಬದುಕಿನ ಅನೇಕ ವಿವರಗಳನ್ನು ಇನ್ನೂ ಪೂರ್ತಿ ಬಿಟ್ಟುಕೊಡದ ಪಾರ್ತಿಸುಬ್ಬನಂಥ ವ್ಯಕ್ತಿತ್ವಗಳು ಬಹುಶಃ ಅದೂ ಒಂದು ಕಾರಣವಾಗಿ ತಮ್ಮ ಕುರಿತಾದ ಆಕರ್ಷಣೆಯನ್ನು ಕಳೆದುಕೊಂಡಿಲ್ಲ. ಪಾರ್ತಿಸುಬ್ಬ ಎಂಬ ಹೆಸರೂ ಕುತೂಹಲಕಾರಿ. ಜಿಜ್ಞಾಸುವನ್ನು ಆ ಹೆಸರು ಮೂಗುತೂರಿಸಿ ಕರೆಯುತ್ತದೆ. ಅಪ್ಪನ ಬಗೆಗೆ ಹೇಳಿಕೊಂಡು ಖುಷಿಪಡಲಾಗದೆ ಅಮ್ಮನ ಆಶ್ರಯದಲ್ಲೆ ವ್ಯಕ್ತಿತ್ವವನ್ನು ರೂಪಿಸಿಕೊಂಡು ಒಂದು ತೆರನ ಕೀಳರಿಮೆಯೂ ಅನಾಥಪ್ರಜ್ಞೆಯೂ ಕಾಡಿದ ಕಾರಣವಾಗಿ ಯಕ್ಷಗಾನದ ಮರೆಹೊಕ್ಕು ಕಂಡ–ಕಂಡ ದೇವ–ದೇವಿಯರಿಗೆ ಶರಣಾಗಿ ಅವರನ್ನು ಹಾಡಿನುತಿಸಿ ನೆಮ್ಮದಿ ಕಂಡ ಕಾರಣಕ್ಕೇ ಇರಬೇಕು, ಯಕ್ಷಗಾನ ಸಭಾಲಕ್ಷಣದಲ್ಲಿ ಅಷ್ಟೊಂದು ದೇವರನ್ನು ಹಾಡಿಹೊಗಳಿ ತನ್ನ ಮೇಳದ ಹುಡುಗರನ್ನು ನಮೂನೆವಾರು ಕುಣಿಸಿ ದಣಿಸಿದ್ದು, ದಣಿದದ್ದು, ಆ ಸ್ತುತಿಗಳಲ್ಲಿನ ಭಕ್ತಿಯೇನು, ಶೃಂಗಾರವೇನು, ಹಾಸ್ಯವೇನು!! (ಸಭಾಲಕ್ಷಣುವು ಪಾರ್ತಿಸುಬ್ಬನಿಗಿಂತಲೂ ಹಿಂದೆ ಬದುಕಿದ್ದ ಮಧೂರು ಬೆನಕಯ್ಯ ಭಾಗವತರದು ಎಂಬುದು ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯ. ನೋಡಿ. ಪು.೬೭೫. ಪಾರ್ತಿಸುಬ್ಬನ ಯಕ್ಷಗಾನಗಳು. ಸಂ: ಕುಕ್ಕಿಲ ಕೃಷ್ಣಭಟ್, ಪ್ರ:ಕೀಲಾರು ಗೋಪಾಲಕೃಷ್ಣಯ್ಯ ಪ್ರತಿಷ್ಠಾನ, ಸಂಪಾಜೆ, ೨೦೦೯).

ಸಭಾಲಕ್ಷಣದಲ್ಲಿನ ಸ್ತುತಿಪದ್ಯಗಳು ಮದವೂರ ಮದನೇಶ ವಿಘ್ನೇಶರಿಂದ ಪ್ರಾರಂಭವಾಗಿ ದಕ್ಷಿಣಕ್ಕೆ ಸಾಗಿ ಕೇರಳದ ದೇವಾಲಯಗಳನ್ನೂ ಮತ್ತೆ ಉತ್ತರಕ್ಕೆ ಹೋಗಿ ಆನೆಗುಡ್ಡೆ, ನಂಜನಗೂಡು, ಧರ್ಮಸ್ಥಳ ಮುಂತಾದ ಕನ್ನಡ ನಾಡಿನ ದೇವದೇವಿಯರನ್ನೂ ಒಳಗೊಂಡಿವೆ. ಮೇಳದಲ್ಲಿ ಕಲಾವಿದನಾಗಿ ರೂಪುಗೊಳ್ಳಲು ಅಗತ್ಯವಾದ ಹೆಜ್ಜೆಗಾರಿಕೆ, ಅಭಿನಯ ಚುರುತತೆ, ವಿಭಿನ್ನ ರಸಭಾವ ಪ್ರಕಟಣ ಸಾಮರ್ಥ್ಯಗಳಿಗೆ ಒಂದು ತಾಲೀಮುರಂಗವಾಗುವಂತೆ ವೈವಿಧ್ಯಮಯ ರಾಗ–ತಾಳ–ಮಟ್ಟುಗಳಲ್ಲಿ ಈ ಸ್ತುತಿಗಳಿವೆ. ಶ್ರೀರಾಮ, ಕೃಷ್ಣ, ಶಿವ, ಪಾರ್ವತಿ, ಗಣಪತಿ, ಷಣ್ಮುಖ

(ಸುಬ್ಬರಾಯ) ಮುಂತಾದ ದೇವತೆಗಳೂ ಪ್ರದರ್ಶನವು ರಂಜನೀಯವಾಗುವಂತೆ ಕೋಡಂಗಿ, ಬಾಲಗೋಪಾಲ, ಚಂದಭಾಮ, ದೂತಿ, ರಾಧಾಮಿತ್ರವಿಂದೆ, ಇಂದುವದನೆ ಮುಂತಾದ ಯಕ್ಷಗಾನೀಯ ಪಾತ್ರಗಳೂ ಇಲ್ಲಿವೆ. ಮೇಳದ ಮುಖ್ಯಸ್ತ್ರೀವೇಷ, ಹಾಸ್ಯಗಾರ ಮುಂತಾದವರಿಗೂ ಇಲ್ಲಿ ಸಾಕಷ್ಟು ಭೂಮಿಕೆಯಿದೆ. ಕೊನೆಗೆ ಮತ್ತೆ ಮದವೂರಿಗೆ ಮರಳಿ ಲಕ್ಷ್ಮೀ ವೆಂಕಟಾಚಲನ (ಇದು ಯಾರು? ಯಾವೂರಿನ ದೇವರು?–ಚಿಂತನೀಯ) ಸ್ನಮಿತ್ರ ಶಂಕರನನ್ನೂ ವಿಘ್ನೇಶ್ವರನನ್ನು ವಂದಿಸಿ ಸಭಾಲಕ್ಷಣ ಭಾಗವು ಮುಗಿಯುತ್ತದೆ.

ಸಭಾಲಕ್ಷಣದ ಸ್ತುತಿ ಪದ್ಯಗಳಲ್ಲಿ ಹತ್ತನೆಯದಾಗಿ ಬರುವ, "ಶರಣು ತಿರುವಗ್ರಶಾಲಿವಾಸಿನಿ", ಎಂದು ಆರಂಭವಾಗುವ ದೇವೀಸ್ತುತಿಯು ನಾನಾಮಗ್ಗುಲುಗಳಿಂದ ವಿಶಿಷ್ಟವೂ ಕುತೂಹಲಕಾರಿಯೂ ಆಗಿದೆ. ಈ ಸ್ತುತಿ ಪದ್ಯದ ವಿಷಯಗಳನ್ನು ವಿಸ್ತರಿಸುವ ಮುನ್ನ ಒಂದು ಮುಖ್ಯ ವಿಚಾರವನ್ನು ಪ್ರಸ್ತಾಪಿಸಬೇಕಾಗಿದೆ. ಕಥಕ್ಕಳಿಯೆಂಬ ವಿಕಸಿತ ಕಲಾರೂಪಕ್ಕೆ ಮುಖ್ಯ ಆಕರಗಳಾದ ಕೃಷ್ಣನಾಟ್ಟಂ ರಾಮನಾಟ್ಟಂಗಳು ರೂಪುಗೊಂಡಿದ್ದು, ಅವುಗಳೊಳಗೆ ತಥಾಕಥಿತ ಸ್ಪರ್ಧೆಯ ಸತ್ಯಾಸತ್ಯತೆ ಇತ್ಯಾದಿಗಳನ್ನು ಒಳಗೊಂಡು ಅವುಗಳ ಸ್ವರೂಪದ ಪೂರ್ಣ ವಿವರಗಳು ಲಭ್ಯವಾಗಬೇಕು. ಅವುಗಳಿಂದ ಕಥಕ್ಕಳಿ ಒಡಮೂಡಿದ ಹಂತಗಳ ಸ್ಪಷ್ಟ ಚಿತ್ರವು ದೊರೆಯಬೇಕು. ಬಳಿಕವಷ್ಟೇ ಯಕ್ಷಗಾನ ಕಥಕ್ಕಳಿಗಳ ಪರಸ್ಪರ ಪ್ರಭಾವ, ಅವಲಂಬನೆಗಳ ಬಗೆಗೆ ಚಿತ್ರವು ಸ್ಫುಟವಾಗಬಲ್ಲವು, ಹಾಗಾದಾಗ ಪಾರ್ತಿಸುಬ್ಬನೆಂಬ ಗೌಪ್ಯ ಕಲಾವಿದನ ರೂಪುರೇಷೆಗಳೂ ಸ್ಪಷ್ಟವಾದಾವು. ಈಗ ಈ ಸ್ತುತಿ ಪದ್ಯದ ಬಗೆಗೆ:

**ಸ್ತುತಿ ಪದ್ಯ** **ರಾಗ:ಮಧ್ಯಮಾವತಿ** **ತಾಳ:ತ್ರಿವುಡೆ**

**ಶರಣು ತಿರುವಗ್ರಶಾಲಿವಾಹಿನಿ ಶರಣು ಶ್ಯಾಮಳ ರೂಪಿಣಿ**
**ಶರಣು ಶಂಕರಿ ಗೌರಿಪಾರ್ವತಿ ಶರಣುಭಳಿರನ್ನಪೂರಿಣೀ..**
**ಶರಣು ಶರಣು॥**

**ಚಂದ್ರವದನೇ ಸುಂದರೀ ಪರಾಶಕ್ತಿದೇಹಿ ಸುಮಂಗಲೇ**
**ಮಂತ್ರರೂಪಿಣಿ ಕನಕಭೂಷಿಣಿ ನಾರಾಯಣಿ ಪದ್ಮಧಾರಿಣಿ..**
**ಶರಣು ಶರಣು॥**

**ಸಿಂಹವಾಹಿನಿ ಮಹಿಷಮರ್ದಿನಿ ದೇವರಡಿ ಪಣಿಕಾರಣಿ**
**ಪಂಕಜಾಕ್ಷೀ ಅಖಿಲಜನ ಪರಿಪಾಲಿನೀ ಗುಣಶಾಲಿನೀ..**
**ಶರಣು ಶರಣು॥**

**ಲೋಕನಾಯಕಿ ಏಕರೂಪಿಣಿ ಓದುವೋಂಕಾರವಾಯಿನಿ**
**ನಾಗರಾಜಕುಮಾರಿ ಭೈರವಿ ನಾರಾಯಣೀ ಅನ್ನಪೂರಿಣಿ..**
**ಶರಣು ಶರಣು॥**

ಈ ಸ್ತುತಿ ಪದ್ಯದ ಬಗೆಗೆ ಈಗಾಗಲೇ ಯಕ್ಷಗಾನದ ಅನೇಕ ಚಿಂತಕರು ಗಮನಹರಿಸಿದ್ದಾರೆ.

ಕವಿಭೂಷಣ ವೆಂಕಪ್ಪಶೆಟ್ಟಿ (ಅವರ ಅಭಿಪ್ರಾಯಗಳನ್ನೊಪ್ಪುತ್ತ ಕುಕ್ಕಿಲ ಕೃಷ್ಣಭಟ್), ಪುಂಡೂರು ಗೋಪಾಲಕೃಷ್ಣ ಪುಣಿಂಚತ್ತಾಯ, ಅಮೃತ ಸೋಮೇಶ್ವರ ಮುಂತಾದವರ ಲಕ್ಷ್ಯ ಅತ್ತ ಹಂದಿದೆ. ಇನ್ನಷ್ಟು ವಿದ್ವಾಂಸರು ಗಮನಹರಿಸಬೇಕಾಗಿದೆ.

ತಿರುವಾಂಕೋಡು ಎಂಬ ಊರನ್ನೇ ತಿರುವಗ್ರವೆಂದು ಹೇಳಿರಬೇಕೆಂದು ವೆಂಕಪ್ಪಶೆಟ್ಟರು ಮಾಡಿದ ಊಹೆಗೆ ಕುಕ್ಕಿಲ ಕೃಷ್ಣಭಟ್ಟರೂ ಸಹಮತ ಸೂಚಿಸಿದ್ದಾರೆ. (ನೋ.ಥಥುಥ ಪೂರ್ವೋಕ್ತ ಪಾರ್ತಿಸುಬ್ಬನ ಯಕ್ಷಗಾನಗಳು). ಆದರೆ “ದಕ್ಷಿಣದ ಯಕ್ಷಗಾನ” ಎಂಬ ಕೃತಿಯಲ್ಲಿ ಗೋಪಾಲಕೃಷ್ಣ ಪುಣಿಂಚಿತ್ತಾಯ, ಪುಂಡೂರು– ಇವರು ಈ ಸ್ತುತಿಯ ಬಗೆಗೆ ಹೀಗೆ ಅಭಿಪ್ರಾಯಪಟ್ಟಿದ್ದಾರೆ.

ಬಾಲ್ಯದಲ್ಲಿ ಸುಬ್ಬನು ತಂದೆಯ ಜತೆಯಲ್ಲಿಯೇ ವಾಸವಾಗಿದ್ದ ತಿರುವಗ ಚೆರುಕುನ್ನ್‌ನ ಭಗವತೀ ಕ್ಷೇತ್ರದ ದೇವರನ್ನು ಕುರಿತು ಹಾಡಿದ್ದಾನೆ. ಮೊದಲ ಚರಣವನ್ನು ಶರಣು ತಿರುವಗ್ರಶಾಲವಾಸಿನಿ... ಎಂದು ಇಟ್ಟುಕೊಂಡಿದ್ದಾನೆ. (ತಿರುವಗ–ಕೋಲತ್ತಿರಿ. ಇದು ಭೂತಾಳ ಪಾಂಡ್ಯರಾಯನ ನಾಲ್ಕು ರಾಜಧಾನಿಗಳಲ್ಲಿ ತೆಂಕಣ ರಾಜಧಾನಿಯೆಂದು ವೆಂಕಪ್ಪ ಶೆಟ್ಟರು ಹೇಳಿದ್ದನ್ನು ಉಲ್ಲೇಖಿಸಿದ್ದಾರೆ.) ಅಲ್ಲದೇ ಈ ಸ್ತುತಿಯಲ್ಲಿ ಶ್ಯಾಮಲಾಂಗಿ, ಗೌರಿ ಮನೋಹರಿ, ಶಂಕರಾಭರಣ, ಸಿಂಹೇಂದ್ರ ಮಧ್ಯಮ, ನಾಯಕಿ, ಭೈರವಿ, ದೇವಗಾಂಧಾರಿ, ಕನಕಾಂಗಿ ರಾಗಗಳನ್ನು ಸೂಚಿಸಿದ್ದಾನೆ.

ಆ ದೇವರಿಯ ಕಂಚಿನ ಪ್ರತಿಮೆಯನ್ನು ಹಿಡಿದುಕೊಂಡು ಭಜಕರಾಗಿದ್ದ ಎಷ್ಟೋ ಮಂದಿ ಮಲಬಾರಿನವರು ಪ್ರತಿ ಮನೆಗೂ ಬೇಡುತ್ತ ಬರುವುದು ಕುಂಬಳೆ ಸೀಮೆಯವರಿಗೆ ಹೊಸತೇನೂ ಅಲ್ಲ. ನೀಲೇಶ್ವರ ಅರಸರ ಆಳ್ವಿಕೆಗೆ ಒಳಪಟ್ಟು ಕಥಕ್ಕಳಿ ಮೇಳವನ್ನು ನಡೆಸುತ್ತ ಬರುವ ಚಿರಕ್ಕಲ್ ಅರಮನೆಯ ಸಮೀಪವೇ ಈ ಕ್ಷೇತ್ರವು ಇದೆ. ಈ ಪ್ರದೇಶದಲ್ಲೇ ಸುಬ್ಬನು ಬಾಲ್ಯವನ್ನು ಕಳೆದ. ಆ ದೇವಿಯ ಕೃಪೆಯಿಂದಲೇ ಅವನೊಬ್ಬ ಕವಿಯಾದ, ಕುಂಬಳೆ ಸೀಮೆಯ ಯಕ್ಷಗಾನದ ನಾಂದೀ ಪುರುಷನಾದ. (ಪು.೫೮, ೫೯, ೬೦. ದಕ್ಷಿಣದ ಯಕ್ಷಗಾನ, ಲೇಖಕ ಮತ್ತು ಪ್ರಕಾಶಕ: ಗೋಪಾಲಕೃಷ್ಣ ಪುಣಿಂಚಿತ್ತಾಯ, ಪುಂಡೂರು. ೧೯೮೩)

ಪುಣಿಂಚಿತ್ತಾಯರು ಈ ಸ್ತುತಿ ಪದ್ಯದ ಲಕ್ಷ್ಯದೇವತೆಯನ್ನು ಚೆರುಕುನ್ನ್‌ನ ಭಗವತಿ ಎಮದು ಗುರುತಿಸಿರುವುದು ಸರಿಯಾಗಿದೆ. ಉಳಿದಂತೆ ಅವರ ಅನೇಕ ವಿಚಾರಗಳನ್ನು ಒಪ್ಪುವುದು ಕಷ್ಟ.

‘ನಾನು ಕಂಡ ರಾಷ್ಟ್ರಕವಿ ಮತ್ತು ಇತರ ಲೇಖನಗಳು’ ಎಂಬ ಪುಟ್ಟಕೃತಿಯಲ್ಲಿ ಶರಣು ತಿರುವಗ್ರಶಾಲವಾಸಿನಿ ಎಂಬ ತಲೆಬರೆಹದ ಲೇಖನದಲ್ಲಿ ಅಮೃತ ಸೋಮೇಶ್ವರರು– “ಧರ್ಮಾರ್ಥ ಊಟಕ್ಕೆ ಚೆರುಕುನ್ನಿಗೆ ಹೋಗಬೇಕು. ಎಂಬ ಹೇಳಿಕೆ ಹಿಂದೆ ಇತ್ತು. ಪಾರ್ತಿಸುಬ್ಬ ಕವಿಯನ್ನು ಅವನ ತಂದೆ ಚೆರುಕುನ್ನಿಗೆ ಕರೆದುಕೊಂಡು ಹೋಗಿದ್ದನೆಂಬ ಐತಿಹ್ಯವಿದೆ” ಎಂಬ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಆ ಸ್ತೋತ್ರದೇವತೆ ಚೆರುಕುನ್ನಿನ ಅಗ್ರಶಾಲ ಭಗವತಿ ಎಂಬುದನ್ನು ಅವರು ಒಪ್ಪಿದ್ದಾರೆ. (ಪು.೧೫.ಪೂರ್ವೋಕ್ತ ಕೃತಿ) [ಹಿಂದೊಮ್ಮೆ ಸಾಂದರ್ಭಿಕವಾಗಿ ಚೆರುಕುನ್ನ್ ಭಗವತಿಯ ವಿಷಯ ಪ್ರಸ್ತಾಪಿಸಿ ನಾನು ಅಲ್ಲಿ ಹೋಗಿ ಆ ವಿಚಾರಕ್ಕೆ ಸಂಬಂಧಿಸಿ ಮಾಹಿತಿಗಳನ್ನು ಸಂಗ್ರಹಿಸಲು ಸೂಚಿಸಿದವರು ಅಮೃತರೇ].

ಹಿರಿಯ ಬಲಿಪರೆಂದೇ ಖ್ಯಾತನಾಮರಾದ ದಿ॥ ಬಲಿಪ ನಾರಾಯಣ ಭಾಗವತರು ಈ ಸ್ತುತಿಯ ಮೊದಲ ಚರಣವನ್ನು ಶರಣು ತಿರುವಗ್ರಶಾಲವಾಸಿನಿ ಎಂದೇ ಹಾಡುತ್ತಿದ್ದರೆಂಬ ಪ್ರತೀತಿ ಇದೆ.

ಏನೇ ಇರಲಿ, ಈ ಸ್ತುತಿಯ ದೇವತೆ ಚೆರುಕುನ್ನ್ ಅಗ್ರಶಾಲೆಯ ಭಗವತಿ ಎಂಬುದು ಸಂಶಯಾತೀತ. ಕೇರಳದ ಹಲವು ಜಾಗಗಳೊಂದಿಗೆ ಪಾರ್ತಿಸುಬ್ಬನ ನಂಟು ಸರ್ವವಿದಿತ. ತುಳು ಸಂಸ್ಕೃತಿಯ ದಕ್ಷಿಣ ತುದಿ ಕಾಸರಗೋಡಿನ ಪ್ರಸಿದ್ಧ ಊರು ಕುಂಬಳೆ, ಅಂತೆಯೇ ಮಲಯಾಳಂ ಪ್ರಾಬಲ್ಯದ ಸಾಂಸ್ಕೃತಿಕ ರಾಜಧಾನಿ (ಬಡಗು ತುದಿ) ಕಣ್ಣೂರು ಸಮೀಪದ ಚಿರಯ್ಕಲ್ (ಚಿರಕ್ಕಲ್). ನೀಲೇಶ್ವರಂ ಅರಸರು ಇವರ ಕೈಕೆಳಗಿದ್ದವರು. ಚಿರಯ್ಕ್ಕಲ್ ಎಂದರೆ ಕೆರೆಯ ಸಮೀಪದ/ ಸುತ್ತಮುತ್ತಲಿನ ಊರು ಎಂದರ್ಥ.

ಈ ಪ್ರದೇಶವನ್ನಾಳಿದ ಪ್ರಮುಖ ಎರಡು ರಾಜವಂಶಗಳೆಂದರೆ ಮೂಷಕ ಮತ್ತು ಕೋಲತ್ತಿರಿ (ಕಾಲಾನುಕ್ರಮದಲ್ಲೂ). ಚಿರಕ್ಕಲ್ ಅರಸರ/ಕೋಲತ್ತಿರಿಗಳ ಖ್ಯಾತ ಆರಾಧ್ಯದೇವತೆಗಳು ನಾಲ್ಕು: ೧. ಮಾಡಾಯಿಕ್ಕಾವ್‌ನ ಭದ್ರಕಾಳಿ/ಭಗವತಿ. ೨. ಚೆರುಕುನ್ನ್‌ನ ಅಗ್ರಶಾಲ ಭಗವತಿ/ಅನ್ನಪೂರ್ಣೇಶ್ವರಿ. ೩. ಪಾಲಾಯಿ (ಚಿರಕ್ಕಲ್‌ನಲ್ಲಿದೆ) ಶ್ರೀಕೃಷ್ಣ ಮತ್ತು ೪. ತಳಿಪ್ಪರಂಬ್‌ನ ಕಳರಿವಾದುಕ್ಕಲ್ ಶ್ರೀಕೃಷ್ಣ ಇವಲ್ಲದೇ ಸುಮಾರು ನೂರರಷ್ಟು ಪ್ರಾಚೀನ ಪರಂಪರೆಯ ದೇವಾಲಯಗಳ ಪಾರಂಪರಿಕ/ಆನುವಂಶಿಕ ಮೊಕ್ತೇಸರರು ಚಿರಕ್ಕಲ್ ಅರಸರೇ.

ಭಾರತದಾದ್ಯಂತ ವಿಖ್ಯಾತ ಅನ್ನಪೂರ್ಣೇಶ್ವರಿಯವರು ನಾಲ್ಕು ಕಡೆಯಂತೆ.
೧. ಹಿಮಾಲಯದ ಜ್ಯೋತಿ ಮಠ ಸಮೀಪ,
೨. ಕಾಶಿ, ೩. ಕಾಂಚೀ, ೪. ಚೆಕರುಕುನ್ನು.

ಮೂಷಕವಂಶದ ವಳಭ/ವಲ್ಲಭನೆಂಬ ಅರಸು (ಭೃಗುವಂಶೀಯನಾದ ಒಬ್ಬ ವಿಪ್ರ ಎಂದು ಇನ್ನೊಂದು ಕಥೆ) ಕಾಶೀಪುರಾಧೀಶ್ವರಿ ಅನ್ನಪೂರ್ಣೇಶ್ವರಿಯನ್ನು ಭಕ್ತಿಯಿಂದ ಆರಾಧಿಸಿ ಮೆಚ್ಚಿಸಿ ಚೆರುಕುನ್ನಿಗೆ ಬರಮಾಡಿಸಿದನಂತೆ. ಹಾಗೇ ದೇವಿ ಬರುವಾಗ ಹಲವು ತಳಿಗಳ ಭತ್ತದ ಬೀಜಗಳನ್ನು ತಂದಳೆಂದು ಪ್ರತೀತಿ. ಮೂಷಕ ಅರಸರಿಗೆ ತೆಂಕು ಅಧಿಪತ್ಯವಿತ್ತು. ಹಾಗೆ ಪ್ರಬಲರಾಗಿದ್ದ ಮೂಷಕ ಅರಸರಲ್ಲಿ ದಂತ ಕಥೆಯಂತೆ ಖ್ಯಾತನಾದ ವಳಭನು ನಿರ್ಮಿಸಿದ ಅನ್ನಪೂರ್ಣೇಶ್ವರಿಯ ಆದಿದೇವಾಲಯದಲ್ಲಿ ಒಂದು ಸಾವಿರ ಮಂದಿ ಕುಳಿತು ಉಣ್ಣುವ ಸೌಕರ್ಯವಿದ್ದ ಅಗ್ರಶಾಲೆಯಿತ್ತಂತೆ. ಅನ್ನದಾನಕ್ಕಾಗಿ ವಳಭರಾಜನು ದತ್ತಿಕೊಟ್ಟ ಸ್ಥಳಗಳೆಂದರೆ–ತಳಿಯಾರ್ ಕಡಪ್ಪುರ, ಮಠತ್ತಿಲ್ ಅರಯಾಕೀಳ್(ಮ್), ಪ್ರಯಾಂಕೋಟ್ಟಮ, ಮಾಟ್ಟಾಮಕೀಳ್(ಮ್), ಕವಿಣಿಶ್ಶೇರಿ, ತಾವತ್ತ್‌ಮಠಂ, ಮುಂಚತ್ತ್ ಮಠಂ, ಪರಪ್ಪಿನಿಶ್ಶೇರಿ ಮುಂತಾದುವು. ತೆಂಕುವಳಪಟ್ಟಣಂ ನದಿಯಿಂದ ಬಡಗು ಪಳ(ವಿ)ಯಂಜಡಿ ಹೊಳೆಯವರೆಗೆ ಇಲ್ಲಿನ ಅನ್ನಪೂರ್ಣೇಶ್ವರಿಯ ಧಾರ್ಮಿಕ ಪ್ರಭಾವವು ಇಂದಿಗೂ ಕಂಡುಬರುತ್ತಿದೆ ಎನ್ನಲಾಗಿದೆ. (ಅನ್ನದಾನಾದಿ ಸಾತ್ತ್ವಿಕ ಗುಣಗಳು– ಈ ಪ್ರದೇಶದ ಜನರಲ್ಲಿದೆ).

ಚಿರಕ್ಕಲ್ ಅರಸರ ನೇರ ಆಡಳಿತವಿದ್ದ ಈ ಮುಖ್ಯ ದೇವಾಲಯದ ಪಾರಂಪರಿಕ ತಂತ್ರಿಗಳು– ಕಾಟ್ಟುಮಾಡಂ ನಂಬೂದಿರಿಯವರು. ಏಳು ದಿನಗಳ ವಾರ್ಷಿಕ ಜಾತ್ರೆ ಗಂಭೀರವಾಗಿ ಜರುಗುತ್ತದೆ. ಈ ದೇವಾಲಯದಲ್ಲಿ ಧ್ವಜಸ್ತಂಭವಿಲ್ಲ. ಮುರಕಲ್ಲಿನಿಂದಲೇ ದೇವಾಲಯದ ಎಲ್ಲಾ ಗೋಡೆಗಳು ನಿರ್ಮಿತವಾಗಿದ್ದು, ಅದನ್ನು ಸಾರಣೆ ಮಾಡದೆ ಉಳಿಸಿಕೊಂಡಿದ್ದಾರೆ. ಅಂಗಣ ಸಮೇತ ದೇವಾಲಯವು ಆರು ಎಕರೆ ಸ್ಥಳದಲ್ಲಿ ವ್ಯಾಪಿಸಿದೆ. ಸಮೀಪದ ದೇವಾಲಯ ಪುಷ್ಕರಿಣಿಯು ಐದೂವರೆ ಏಕರೆ ವಿಸ್ತಾರವಾಗಿದೆ. ದೇವಾಲಯದ ಮುಂಭಾಗದ ಅಂಗಣದ ಹೊರ ಅಂಚಲ್ಲಿ ಚೋಯಮಬಲಂ ಇದೆ. (ಯೋಗಿದ್ಭ್) ಜೋಗಿ. ಜೋಗಿಯು ಅಪಭ್ರಂಶವಾಗಿ ಮಲಯಾಳಂನಲ್ಲಿ ಜೋಯಿ ಎಂದಾಗಿದೆ. ಇವರು ನಾಥ ಪಂಥೀಯರು. ಪ್ರಾಚೀನ ಕಾಲದಿಂದಲೂ ಜಂಗಮ ಜೋಗಿಗಳಿಗೆ ಈ ದೇವಾಲಯ ದರ್ಶನೀಯವೂ ಆಶ್ರಯದಾಯಕವು ಆಗಿತ್ತು. ಜೋಗಿಗಳ ಪ್ರಾಧಾನ್ಯ ಸಾರುವ ಕುರುಹು–ಜೋಯಂಬಲ. ಇದನ್ನು ಜೋಗಿಕಟ್ಟೆ ಎಂದು ಬೇಕಾದರೆ ಕನ್ನಡದಲ್ಲಿ ಕರೆಯಬಹುದು). ಅನತಿ ದೂರದ ತಳಿಪ್ಪರಂಬ್ ನ ರಾಜರಾಜೇಶ್ವರ ದೇವಾಲಯಕ್ಕೂ ಇಲ್ಲಿಗೂ ಅವಿನಾಸಂಬಂಧ. ರಾಜರಾಜೇಶ್ವರನು ನಿತ್ಯವೂ ರಾತ್ರಿ ಹೊತ್ತು ಇಲ್ಲಿನ ಅನ್ನಪೂರ್ಣೆ ಪಾರ್ವತಿಯನ್ನು ಕಾಣಲು ಇಲ್ಲಿಗೆ ಬರುತ್ತಾನೆಂದು ಪ್ರತೀತಿ. ರಾಜರಾಜೇಶ್ವರ ತನ್ನ ಅಮೂಲ್ಯ ಆಭರಣ ಒಡವೆಗಳನ್ನೆಲ್ಲ ಇಲ್ಲಿಯ ದೇವಿಗೆ ಪ್ರೀತಿಯಿಂದ ಕೊಟ್ಟುಬಿಟ್ಟನಂತೆ– ಇಂಥ ಅನೇಕ ರೋಚಕ ಮಾಹಿತಿಗಳಿಗೆ ಮತ್ತು ಕ್ಷೇತ್ರ ಪರಿಚಯದ ಹೆಚ್ಚಿನ ವಿವರಗಳಿಗೆ ನೋಡಿ {ಮಾತಾನ್ನಪೂರ್ಣೇಶ್ವರಿ: ಚೆರುಕುನ್ನಿಲಮ್ಮ,

ಲೇ:ಗೋಪಿನಾಥ್ ಆಯಿರಂತೆಂಜ ಕಣ್ಣೂರು ಸಂ:ಡಾ.ಕೆ.ಹೆಚ್.ಸುಬ್ರಮಣ್ಯನ್ ಪ್ರ:ಕೈರಳಿ ಬುಕ್ಸ್–೨೦೧೮}.

ಚೆರುಕುನ್ನ್ ದೇವಾಲಯವು ಬಲಬದಿಯಲ್ಲಿ ಶ್ರೀಕೃಷ್ಣನ ಸನ್ನಿಧಾನವನ್ನೂ ಎಡಬದಿಯಲ್ಲಿ ಭಗವತಿ/ಅನ್ನಪೂರ್ಣೇಶ್ವರಿಯ ಸನ್ನಿಧಾನವನ್ನು ಒಳಗೊಂಡ ಸಂಕೀರ್ಣ. ಉಪದೇವತೆಗಳಿಲ್ಲ. ಅನ್ನಪೂರ್ಣೆಯ ಗರ್ಭಗೃಹದ ಹೊರಗಿನ ಕಿರು ಅಂಗಣ ದಾಟಿದರೆ ಎಡಕ್ಕೆ ಅಗ್ರಶಾಲೆ=ದೇವಾಲಯದ ಪಾಕಶಾಲೆ ಮತ್ತು ಭಕ್ತರ ಭೋಜನ ಗೃಹ. ಹೊರ ಅಂಗಣದಲ್ಲೂ ಅನ್ನಪ್ರಸಾದ ವಿತರಣೆ ನಡೆಯುತ್ತದೆ. ಮಧ್ಯಾಹ್ನ ಮತ್ತು ರಾತ್ರಿ ಭಕ್ತರಿಗೆ ಉಚಿತ ಅನ್ನದಾನವು ಅನಾದಿಕಾಲದಿಂದಲೇ ನಡದು ಬರುತ್ತಿದೆಯಂತೆ. ಇಪ್ಪತ್ತನೆ ಶತಮಾನದ ಪೂರ್ವಾರ್ಥದ ಭೀಕರ ಬರಗಾಲ ಕ್ಷಾಮಗಳ ಕಾಲದಲ್ಲೂ ಇಲ್ಲಿ ಅನ್ನದಾನ ನಡೆಯುತ್ತಲೇ ಇತ್ತಂತೆ. ಇಲ್ಲಿನ ಪಾಕಶಾಲೆಯ ಮತ್ತು ಪ್ರಸಾದ ಭೋಜನೆ/ಅನ್ನದಾನದ ಉಸ್ತುವಾರಿಯು ಪರಂಪರೆಯಿಂದ ಮಣಿಯಂಜಟ್ಟ್ ಇಲ್ಲಂ ನ ಬ್ರಾಹ್ಮಣರದು. ಅನ್ನಕ್ಕೆ ಅಕ್ಕಿ ಅಳೆಯುವಾಗಲೂ ಅನ್ನ ಬೆಂದ ಮೇಲೆ ಭಕ್ತಿರಿಗೆ ಬಡಿಸುವ ಮುನ್ನವೂ ಇದರ ಪ್ರಧಾನ ವ್ಯಕ್ತಿಯು ದೇವಿಯ ಗರ್ಭಗೃಹದ ಮುಂದೆ ಬಂದು ಪ್ರಾರ್ಥಿಸುವ ದೃಶ್ಯವೂ ಭಾವೈಕ್ಯತೆಯನ್ನು ಉದ್ದೀಪಿಸುತ್ತದೆ.

ಭಕ್ತರಿಗೆಲ್ಲ ಬಾಳೆಎಲೆ ನೆಲದಲ್ಲಿ ಹಾಸಿ ಊಟ, ಅನ್ನ ಬಡಿಸುವುದು ಸಟ್ಟಗದಲ್ಲಲ್ಲ. ಮುರದಲ್ಲೇ ಅನ್ನವನ್ನು ಎಲೆತುಂಬ ಸುರುವಲಾಗುತ್ತದೆ. ಇದು ಸಾಂಕೇತಿಕ ಇಲ್ಲಿಗೆ ಬಂದ ಯಾವನೇ ಭಕ್ತ ಅರೆಹೊಟೆ ಉಂಡು ಹೋಗಬಾರದು. ಹೊಟ್ಟೆ ತಂಪಾಗುವಂತೆ ಉಣ್ಣುವುದಕ್ಕಾಗಿ ಮುರದಲ್ಲೆ ಬಡಿಸುತ್ತಾರೆ. ಹಿಂದೆ ತಿಳಿಸಿದಂತೆ ಅನ್ನವನ್ನು ಮುರದಲ್ಲಿ ಭಕ್ತರಿಗೆ ಬಡಿಸುವ ಹಕ್ಕು ಮತ್ತು ಜವಾಬ್ದಾರಿ ಕೂಡ ಮಣಿಯಂಜಟ್ಟ್ ಇಲ್ಲಮನವರಿಗೆ. ಇಲ್ಲಿನ ಇನ್ನೊಂದು ವಿಶೇಷವೆಂದರೆ ಊಟದ ಹೊತ್ತಿಗೆ ದೇವಾಲಯಕ್ಕೆ ತಲುಪಲು ಅಶಕ್ತರಾದವರು ಮತ್ತು ದಾರಿಹೋಕರು–ಒಟ್ಟಿನಲ್ಲಿ ಅಗತ್ಯವಿರುವವರು ದೇವಾಲಯದ ಮುಂದೆ ಅಂಗಣದ ಹೊರಅಂಚಿನ ಸಮೀಪ ಇರುವ ದೊಡ್ಡ ಆಲದ ಮರದ ಬಿಳಲುಗಳಲ್ಲಿ ಊಟದ ಸಾಮಗ್ರಿಗಳನ್ನು/ವ್ಯಂಜನಗಳನ್ನು ಕಟ್ಟಿ ಇರಿಸಿದ್ದನ್ನು ಧಾರಾಳವಾಗಿ ತೆಗೆದುಕೊಂಡು ಉಣ್ಣಬಹುದಾಗಿದೆ. ಈ ಕ್ರಮ ಕೂಡ ಶತಮಾನಗಳಿಂದ ನಡದು ಬರುತ್ತಿದೆಯಂತೆ.

ದಿನಬೆಳಗಾದರೆ ಯುದ್ಧ, ದರೋಡೆ, ಕಿಚ್ಚುಡುವಿಕೆ, ದೊಂಬ, ಸೂರೆಗಳ ಮನುಷ್ಯ ನಿರ್ಮಿತ ಸಂಕಟಗಳ ಜತೆ ಬರಗಾಲ, ಕ್ಷಾಮ ಮಹಾವ್ಯಾಧಿ, ಇತ್ಯಾದಿ ಪ್ರಾಕೃತಿಕ ವಿಪತ್ತುಗಳಿಂದ ಹೈರಾಣಾಗಿ ಅಜ್ಞಾನ, ಬಡತನ, ಮೂಢನಂಬಿಕೆಗಳಿಂದ ಬಳಲುತ್ತಿದ್ದ ಸಾಮಾನ್ಯ ಜನಕ್ಕೆ ಹಸಿವೆ, ಅನ್ನ, ಅನ್ನದಾನ ಎಂಬ ಪದಗಳು ಕೇವಲ ಪದಗಳಾಗದೆ

ನಿತ್ಯ ಬದುಕಿನ ಅವಿಭಾಜ್ಯ ಅನುಭವಕೋಶದ ಉಸಿರಾಗಿದ್ದುವು. ಆ ಹಿನ್ನೆಲೆಯಲ್ಲಿ ಅನ್ನಪೂರ್ಣೇಶ್ವರಿಯು ಅನನ್ಯ ಮಹಿಮಾನ್ವಿತಳಾದ ದೇವತೆಯಾಗಿದ್ದುದು ಸಹಜವೇ ಆಗಿದೆ.

ಬಿಲ್ವಮಂಗಲ ಎಂಬ ಋಷಿ ತೀರ್ಥಯಾತ್ರೆಯ ಪಾದಯಾತ್ರೆ ಮಾಡುತ್ತ ಚೆರುಕುನ್ನ್‌ಗೆ ಬಂದು ಊಟ ಮಾಡಿದ ಬಳಿಕ ತಾನು ಊಟ ಮಾಡಿದ ಎಲೆಯನ್ನು ಎತ್ತಿ ಎಸೆಯದೆ ಸ್ವತಃ ಅನ್ನಪೂರ್ಣೇಶ್ವರಿ ಬಡಿಸಿ ತಾನು ಉಂಡುದರಿಂದ ದೇವಾಲಯದಲ್ಲೆ ಹುಗಿಯುವಂತೆ ಹೇಳಿ ಯಾತ್ರೆ ಮುಂದುವರಿಸಿದನೆಂದೂ ಕೆಲ ದಿನಗಳ ಬಳಿಕ ಮರಳಿ ಬರುತ್ತಾ ತಾನು ನಿರ್ದೇಶಿಸಿದಂತೆ ಮಾಡಿದ್ದಾರೋ ಎಂದು ವಿಚಾರಿಸಿದನೆಂದು ಆಗ ಆತನ ಊಟದ ಎಲೆಯನ್ನು ಉಳಿದ ಎಲೆಗಳೊಂದಿಗೆ ಎಸೆದರೆಂದು ತಿಳಿದು, ತಾನು ಹೇಳಿದಂತೆ ಹುಗಿದಿದ್ದರೆ ದೇವಾಲಯವು ಇನ್ನಷ್ಟು ಸಮೃದ್ಧವಾಗಿ ನಿತ್ಯವೂ 'ಪಾಟ್ಟುಂ ಪಾಯಸವುಂ' (ಹಾಡಿನೊಂದಿಗೆ ನಡೆಸುವ ಆರಾಧನೆ ಮತ್ತು ಪಾಯಸ ಸಹಿತ ಸಮಾರಾಧನೆ) ನಡೆಯುವಂತಾಗುತ್ತಿತ್ತೆಂದೂ ಬಹಿರಂಗ ಪಡಿಸಿದನಂತೆ. ಹೀಗೊಂದು ಐತಿಹ್ಯವೂ ಪ್ರಚಲಿತವಾಗಿದೆ. ಈಗಲೂ ದೇವಾಲಯದ ಅನ್ನದಾನ ವ್ಯವಸ್ಥೆಗೆ ಚ್ಯುತಿ ಬಂದಿಲ್ಲ.

ಅಗ್ರಶಾಲಾವಾಸಿನಿ ಭಗವತಿ ಅನ್ನಪೂರ್ಣೇಶ್ವರಿ ದೇವಾಲಯದಲ್ಲಿ ಎಷ್ಟೋ ಬಾರಿ ಹಸಿವು ನೀಗಿಸಿಕೊಂಡು ಆಕೆಯ ಅನ್ನಪೂರ್ಣೇಶ್ವರಿತ್ವವನ್ನು ಕಂಡ 'ಪಾಟಾಳಿ ಪಾರ್ತಿಸುಬ್ಬನು' ಇಂಥದೊಂದು ಸ್ತುತಿಗೀತೆಯನ್ನು ಸಭಾ ಲಕ್ಷಣದಂಥ ಕೃತಿಯಲ್ಲಿ ಅಳವಡಿಸದಿರಲು ಸಾಧ್ಯವೇ?

ಈ ಸ್ತುತಿಗೀತೆಯಲ್ಲಿ ಪಾಠದೋಷಗಳಿವೆ. ಹಾಡುಗಬ್ಬದ ಸ್ಥಿತಿ ಹಾಗಾಗುತ್ತದೆ ಎಂಬುದನ್ನು ಗ್ರಂಥ ಸಂಪಾದನೆಯ ಓನಾಮ ಬಲ್ಲವರೂ ಬಲ್ಲರು. ಕುಂಬಳೆ ಕವಿರತ್ನ ನರಸಿಂಹ ಲಕ್ಷ್ಮಣನಾಯಕರ ಬಗ್ಗೆ ಬರೆಯುತ್ತ ಪ್ರಾಸಂಗಿಕವಾಗಿ ಗೋವಿಂದ ಪೈಯವರು ಪಾರ್ತಿಸುಬ್ಬನ ಬಗೆಗೆ ಬರೆದಿರುವ ಕೆಲವು ಮಾತುಗಳನ್ನು ಉದ್ಧರಿಸುವುದು ಅಪ್ರಸ್ತುತವಾಗಲಾರದು. "ಆತನ(ಸುಬ್ಬನ) ಅಲಂಕಾರಗಳೆಂದರೆ ಗೋಧಿಯನ್ನು ಹದವಾಗಿ ಬೀಸುವಲ್ಲಿ ಹಿಟ್ಟಿನೊಂದಿಗೆ ಸಹಜವಾಗಿ ಉದುರುವ ಸಜ್ಜಿಗೆಯಂತೆ.... ಆತನ ಪ್ರಾಸಗಳು ಅಲ್ಲಲ್ಲಾದರೂ ಬಲು ಬಡವಾಗಿವೆ, ನ್ಯೂನವಾಗಿವೆ.... ಯಕ್ಷಗಾನದಲ್ಲಿ ಪ್ರತ್ಯೇಕ ತಂತಿಯನ್ನು ಬಾರಿಸಿದ್ದಾನೆ. ಆ ಬಾರಿಸುವಲ್ಲಿ ತುಂಬ ಯಶಸ್ವಿ ಪ್ರಾಸಭಂಗ, ಬಹುಭಾಷಾ ಪದಪ್ರಯೋಗ ಮತ್ತು ತೋಂಡೀ ಸಂಪ್ರದಾಯದಲ್ಲಿ ಉಳಿದು ಬಂದುದರಿಂದ ಈ ಸ್ತುತಿ ಪದ್ಯ ಕೂಡ ಸಮಗ್ರವಾಗಿ ಅರ್ಥವಾಗುತ್ತಿಲ್ಲ. ಆ ನಿಟ್ಟಿನಲ್ಲಿ ಒಂದು ಕಿರುಯತ್ನವನ್ನು ಮಾಡೋಣ.

ತಿರು ಎನ್ನುವುದು ಶ್ರೀ ಎನ್ನುವುದಕ್ಕೆ ತಮಿಳು ಮಲಯಾಳ ಭಾಷೆಯಲ್ಲಿ ಪರ್ಯಾಯವಾಗಿ ನಿಲ್ಲುವ ಪದ. ತಿರುವಗ್ರಶಾಲಿ ವಾಸಿನಿ– ಶ್ರೀ ಅಗ್ರಶಾಲಾವಾಸಿನಿ. ಚೆರುಕುನ್ನ್‌ನಲ್ಲಿ ಅಗ್ರಶಾಲಾ ಭಗವತಿ ಎಂದು ಕರೆಯಲ್ಪಡುವ ದೇವಿ ಎಂದರ್ಥ. ದೇವಿಯು ಬಿಳಿ, ಕೆಂಪು, ಕಪ್ಪು/ಶ್ಯಾಮಲ ವರ್ಣಗಳಲ್ಲಿರುವವಳು. ಅವಳು ಶ್ಯಾಮಳ ರೂಪಿಣಿಯೂ ಹೌದು. ಅಗ್ರಶಾಲಾ ಭಗವತಿಯು ಶ್ಯಾಮಲವರ್ಣ, ದೇವಿಯನ್ನು ಮುಕುರ ರೂಪದಲ್ಲು ಸಟ್ಟುಗ ರೂಪದಲ್ಲೂ ಆವಾಹನೆ ಮಾಡಿ ಪ್ರತಿಷ್ಠೆ ಮಾಡಲಾಗುತ್ತದೆ. ಚೆರುಕುನ್ನು ಭಗವತಿಯು ಅನ್ನಪೂರ್ಣೇಶ್ವರಿಯಾದ್ದರಿಂದ ಸಾಂಕೇತಿಕವಾಗಿ ಸಟ್ಟುಗ ರೂಪದಲ್ಲಿ ಬಿಂಬ ತಯಾರಿಸ ಹೊರಟಾಗ ಒಂದಲ್ಲ ಎರಡಲ್ಲ ಮೂರು ಬಾರಿಯ ಪ್ರಯತ್ನದಲ್ಲೂ ಕಾಸಿದ ಚಿನ್ನ ಕಲ್ಲಾಯಿತಂತೆ. ಆತಂಕಗೊಂಡ ವಳಭ ರಾಜನಿಗೂ ಭಕ್ತರಿಗೂ ಅಭಯವೀಯುತ್ತ ದೇವಿಯು ‘ಆತಂಕ ಬೇಡ. ನಾನು ಮಹಾಕಾಲೇಶ್ವರಿಯೂ ಹೌದು. ಶ್ಯಾಮಲ ರೂಪಿಣಿಯೂ ಹೌದು’ ಎಂದು ಉಸುರಿದಳಂತೆ. ಅವಳು ಕಾಶಿಯಿಂದಲೇ ಬಂದು ಇಲ್ಲಿ ನೆಲೆಯಾದ ಅನ್ನಪೂರ್ಣೇಶ್ವರಿ ಎಂಬುದು ಸ್ಥಳದ ನಂಬುಗೆ.

ಎರಡನೇಯ ಸೊಲ್ಲಿನಲ್ಲಿನ ನಾರಾಯಣಿ ಪದ್ಮಧಾರಿಣಿ ಎಂಬುದು ಅರ್ಥಪೂರ್ಣವೂ ಔಚಿತ್ಯಪೂರ್ಣವೂ ಆದ ಪದಪ್ರಯೋಗ. ದೇವಾಲಯದ ಬಲಗರ್ಭಗುಡಿ ವಿಷ್ಣು/ನಾರಾಯಣನ ಪ್ರತಿಷ್ಠೆ ಉಳ್ಳದ್ದು. ಎಡಭಾಗದ ಭಗವತಿ ಕೃಷ್ಣ/ ವಿಷ್ಣು ಸಹೋದರಿ. ಆದುದರಿಂದ ಅವಳು ನಾರಾಯಣಿ ಪದ್ಮಧಾರಿಣಿ.

ಮೂರನೆಯ ಸೊಲ್ಲಿನಲ್ಲಿ ದೇವರಡಿ ಪಣಿಕಾರಿಣಿ ಎಂಬ ಪದ ಗಮನ ಸೆಳೆಯುತ್ತದೆ. ಇದು ತಮಿಳು ಮಲಯಾಳಗಳಲ್ಲಿ ಬಳಕೆಯಿರುವ ಪದ. ಅಡಿಪಣಿಯುಗ ಎಂದರೆ ವಣಂಜುಗ, ಕುಂಬಿಡುಗ (ನಮಸ್ಕರಿಸು, ವಂದಿಸು) ಎಂದು ಮಲಯಾಳಂ ಪ್ರಸಿದ್ಧ ನಿಘಂಟು ಶಬ್ದತಾರಾವಲಿ ಅರ್ಥಕೊಡುತ್ತದೆ. ಅಂದರೆ ದೇವತೆಗಳೆಲ್ಲ ದೇವಿಗೆ ನಮಸ್ಕರಿಸುತ್ತಾರೆ. ಅವರಿಂದ ನಮಸ್ಕಾರ ವಂದನೆಗಳನ್ನು ಪಡೆಯುವವಳು ಎಂದರ್ಥ.

ನಾಲ್ಕನೆಯ ಸೊಲ್ಲಿನಲ್ಲಿ ಪಾಠಕ್ಲೇಶ, ಅರ್ಥಕ್ಲೇಶಗಳು ಓದುಗನಿಗೆ ತ್ರಾಸಕೊಡುತ್ತವೆ. ಏಕರೂಪಿಣಿ ಎಂಬುದಕ್ಕೆ ದೇವಿಯ ಸಹಸ್ರನಾಮಗಳ ಪರಿಚಯವುಳ್ಳ ನಾವು ದೇವಿಯು ಏಕರೂಪಿಣಿಯೂ ಅನೇಕ ರೂಪಿಣಿಯೂ ಆಗಿರುವವಳು ಎಂದು ಸಮಾಧಾನಪಟ್ಟುಕೊಳ್ಳಬಹುದು. ವಿರೋಧಾಭಾಸವೆನಿಸುವಂತೆ ಪದಪ್ರಯೋಗವು ಸಹಸ್ರನಾಮದಲ್ಲಿ ಅಪೂರ್ವವೇನಲ್ಲ. ಓದುವೋಂಕಾರವಾಯಿನಿ, ನಾಗರಾಜಕುಮಾರಿ ಎಂಬುದನ್ನು ತೃಪ್ತಿಕರವಾಗಿ ಅರ್ಥೈಸುವುದು ಕಷ್ಟ. ಎಲ್ಲ ಕ್ಲೇಶಗಳ ಜತೆ ಈ ಸ್ತುತಿಯಲ್ಲಿ ದ್ವಿತೀಯಾಕ್ಷರ ಪ್ರಾಸವೂ ಪಾಲನೆಯಾಗಿಲ್ಲ. ‘ಆತನ ಪ್ರಾಸಗಳು ಅಲ್ಲಲ್ಲಾದರೂ ಬಲುಬಡವಾಗಿವೆ’ ಎಂಬ ಗೋವಿಂದ ಪೈಯವರ ಮಾತು ನಿಜವಾಗಿದೆ.

ನುರಿತ ಭಾಗವತರು ಮತ್ತು ಯಕ್ಷಗಾನ ವಿದ್ವಾಂಸರು ಈ ಸ್ತುತಿ ಪದ್ಯದ ಶುದ್ಧ ಪಾಠವನ್ನು ಕಂಡುಕೊಂಡಾಗ ಸದ್ಯದ ಕ್ಲೇಶಗಳು ಪರಿಹಾರವಾದಾವು. ಹಲವಾರು ಭಾಗವತರುಗಳು ಈ ಪದ್ಯಕ್ಕೆ ತಮ್ಮದೇ ಪಾಠಗಳನ್ನು ಇಟ್ಟುಕೊಂಡು ಹಾಡುತ್ತಿರುವುದು. ಈ ಕಾರಣಕ್ಕೂ ಇರಬಹುದು. ಅಂಥ ಒಂದೆರಡು ಭಿನ್ನ ಪಾಠದ ಪ್ರತಿಗಳು ನನ್ನಲ್ಲಿವೆ. ಸಂಸ್ಕೃತ, ಕನ್ನಡ, ತಮಿಳು, ಮಲಯಾಳಂ ಹಾಗೂ ತುಳು ಭಾಷೆಗಳನ್ನು ಬಲ್ಲವನಾಗಿದ್ದ ಪಾರ್ತಿಸುಬ್ಬನು ವಿಸ್ತೃತ ಸಂಚಾರದಿಂದ ನಾನಾ ಕಲಾ ಪ್ರದರ್ಶನಗಳನ್ನು ಕಂಡು ತನ್ನ ಕಲಾಪರಿಣತಿಗೆ ಅವನ್ನು ಬಳಸಿಕೊಂಡು. ಅವನನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಕೃಷ್ಣನಾಟ್ಟಂ, ರಾಮನಾಟ್ಟಂ, ಕಥಕ್ಕಳಿ, ಚಾಕ್ಯಾರ್ ಕೂತ್ತ್ ಮುಂತಾದ ಕೇರಳೀಯ ಕಲಾ ಪ್ರಕಾರಗಳ ಪರಿಚಯವು ಹೆಚ್ಚು ಸಹಾಯಕವಾದೀತು. ತೆರುಕ್ಕೂತ್‌ನ ಬಗೆಗಿನ ಅವನ ಅರಿವಿನ ಕುರಿತು ವಿದ್ವಾಂಸರು ಬೆಳಕು ಚೆಲ್ಲಬೇಕಾಗಿದೆ. ಸಭಾಲಕ್ಷಣದಲ್ಲಿ ಸ್ತುತಿಸಲ್ಪಟ್ಟ ದೇವತೆಗಳ ಬಗೆಗೆ/ದೇವಾಲಯಗಳ ಬಗೆಗೆ ಸ್ಥೂಲವಾಗಿಯಾದರೂ ತಿಳಿಸಿಕೊಡುವ ಕೃತಿಯೊಂದರ ಅಗತ್ಯವಿದೆ.

**ಅನುಬಂಧ**

ಯಕ್ಷಗಾನ ಸಭಾಲಕ್ಷಣದಲ್ಲಿ ಸ್ತುತಿಸಲ್ಪಟ್ಟ ದೇವ-ದೇವಿಯರು ಅನುಕ್ರಮದಿಂದ

೧. ಮದವೂರ ಮದನೇಶ
೨. ಮದವೂರ ವಿಘ್ನೇಶ (ಗಣಪತಿ ಸ್ತುತಿ ಅಲ್ಲಲ್ಲಿ ಆವರ್ತನೆಯಾಗುತ್ತದೆ)
೩. ಕಣಿಪುರ ಗೋಪಾಲಕೃಷ್ಣ
೪. ಕುಕ್ಕೆ ಸುಬ್ರಹ್ಮಣ್ಯ(ಸುಬ್ಬರಾಯ)
೫. ಕಿದೂರು ಮಹಾಲಿಂಗೇಶ್ವರ
೬. ಶ್ರೀರಾಮ
೭. ಛತ್ರಪುರ ಹನುಮ
೮. ಧರ್ಮಸ್ಥಳ(ಕುಡುಮಪುರ) ಮಂಜುನಾಥ ಮತ್ತು ಅಮ್ಮನವರು
೯. ಮಧೂರು ವಿಘ್ನೇಶ
೧೦. ಅಗ್ರಶಾಲ ಅನ್ನಪೂರ್ಣೇಶ್ವರಿ
(ಸಭಾ ಮಂಡಲ ವಿವರಣೆಯಲ್ಲಿ)
೧೧. ಶ್ರೀರಾಮ
೧೨. ರುಕ್ಮಿಣಿ ವಿಠಲ/ಗದುಗಿನ ನಾರಾಯಣ
(ಸಭಾವಂದನೆ/ಸಭಾಸಪ್ತಾಂಗ ವಂದನೆ) (ಕೋಡಂತಿ ಭಾಗವತ ಸಂವಾದದಲ್ಲಿ)

**ಬಾಲಗೋಪಾಲ ವೇಷಗಳ ಮೂಲಕ:**

ಕೃಷ್ಣ, ರಾಮ, ಭೂಮಿದೇವಿ, ಅಷ್ಟದಿಕ್ಪಾಲಕರು, ಗಣಪತಿ, ಸರಸ್ವತಿ, ರಾಮ–ಸೀತೆ, ವಾಲ್ಮೀಕಿ, ಗಣಪತಿ, ರಾಮ, ಮೂಕಾಂಬಿಕೆ/ಪಾರ್ವತಿ, ಸುಬ್ರಹ್ಮಣ್ಯ, ಶಿವ, ಪಾರ್ವತಿ/ ಅರ್ಧನಾರೀಶ್ವರ (ನಂಜನಗೂರು ಶಿವನ ಉಲ್ಲೇಖ), ಎಡವೂರೀಶ್ವರ.

**ಶಿವ–ಪಾರ್ವತಿ–ವಿಪ್ರಲಂಭ ಶೃಂಗಾರ**
**ಚಂದಭಾಮಾ–ಕೃಷ್ಣ–ವಿಪ್ರಲಂಭ ಶೃಂಗಾರ**
**ರಾಧಾಮಿತ್ರವಿಂದೆ**
**ಐದು ಇಂದು ವದನೆ ಸ್ತ್ರೀ ವೇಷಗಳು–ಬಳಿಕ ಕೃಷ್ಣವೇಷ**
**ಮಿತ್ರವಿಂದ ೆ(ಮುಖ್ಯ ಸ್ತ್ರೀ ವೇಷ) ಗೊಲ್ಲ ಮಾಧವ–ವಿಪ್ರಲಂಭ ಶೃಂಗಾರ**
**ರಾಮನ ಒಡ್ಡೋಲಗ (ರಂಗಾವತಾರ)**
**ಕೊನೆಗೆ–ಮಧೂರು: ಲಕ್ಷ್ಮೀವೆಂಕಟಾಚಲನ ಸನ್ಮಿತ್ರ**
**ಶಂಕರ ವಿಘ್ನೇಶ್ವರರು**

ಇವರುಗಳ ಹೊರತಾಗಿ ಕಟ್ಟು ಹಾಸ್ಯಗಳು
(ಸಮಯ ಸಂದರ್ಭಾನುಸಾರ)

* * *

# ಗೋಷ್ಠಿ – ೪

## ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳು

**– ಡಾ. ಧನಂಜಯ ಕುಂಬ್ಳೆ ಮತ್ತು ದಿವ್ಯಶ್ರೀ ಡೆಂಬಳ**

ಪಾರ್ತಿಸುಬ್ಬ ರಚಿಸಿದ ಯಕ್ಷಗಾನ ಪ್ರಸಂಗಗಳು ಒಟ್ಟು ಹತ್ತು. 'ಸಭಾಲಕ್ಷಣ'ವೆಂಬ ಯಕ್ಷಗಾನದ ಕುರಿತ ಲಕ್ಷಣಗ್ರಂಥವನ್ನೂ ಆತ ರಚಿಸಿದ್ದಾನೆ. ೧. ಪುತ್ರಕಾಮೇಷ್ಠಿ– ಸೀತಾಕಲ್ಯಾಣ ೨. ಪಟ್ಟಾಭಿಷೇಕ– ಪಂಚವಟಿ ೩. ಪಂಚವಟಿ– ವಾಲಿಸಂಹಾರ ೪. ಉಂಗುರ ಸಂಧಿ ೫. ಸೇತುಬಂಧನ ೬. ಅಂಗದ ಸಂಧಾನ ೭. ಕುಂಭಕರ್ಣಾದಿ ಕಾಳಗ ೮. ಕುಶಲವರ ಕಾಳಗ ೯. ಕೃಷ್ಣ ಚರಿತೆ ೧೦. ಐರಾವತ. ಇವುಗಳಲ್ಲಿ ಕೃಷ್ಣಚರಿತೆ ಮತ್ತು ಐರಾವತ ಹೊರತುಪಡಿಸಿ ಉಳಿದ ಎಂಟು ಪ್ರಸಂಗಗಳು ರಾಮಾಯಣದ ಕಥಾವಸ್ತುವನ್ನು ಹೊಂದಿದವು.

ಪಾರ್ತಿಸುಬ್ಬನ ರಾಮಾಯಣ ಪ್ರಸಂಗ ರಚನೆಗೆ ವಸ್ತು, ಕಥನ ಮಾದರಿ, ಶೈಲಿ, ಭಾಷೆ, ಛಂದಸ್ಸು ಮೊದಲಾದ ಹಲವು ನೆಲೆಗಳಿಗೆ ಒದಗಿದ ಮುಖ್ಯವಾದ ಆಕರಗಳು ಕೇರಳದ ರಾಮನಾಟ್ಟಂನ ಪ್ರಬಂಧಗಳು ಮತ್ತು ಕುಮಾರವಾಲ್ಮೀಕಿಯ ತೊರವೆ ರಾಮಾಯಣ. ಅದಲ್ಲದೇ ವಾಲ್ಮೀಕಿ ರಾಮಾಯಣ, ಕೌಶಿಕ ರಾಮಾಯಣ ಮತ್ತು ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತ ಇವುಗಳಿಂದಲೂ ಆತ ಪ್ರಭಾವಿತನಾಗಿದ್ದಾನೆ.

ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳ ಕಥೆ ಒಂದು ಸಮ್ಮಿಶ್ರ ರಾಮಾಯಣ. ಪರಂಪರೆಯಿಂದ ಕೇಳಿದ ಕಥೆ, ವಾಲ್ಮೀಕಿ ರಾಮಾಯಣ, ರಾಮನಾಟ್ಟಂನ ರಾಮಾಯಣ ಪ್ರಸಂಗಗಳು, ತೊರವೆ ರಾಮಾಯಣ, ಕೌಶಿಕ ರಾಮಾಯಣ, ಜೈಮಿನಿ ಭಾರತ, ಹನೂಮದ್ರಾಮಾಯಣ, ಜಾನಪದ ಮೂಲದ ರಾಮಾಯಣ ಕಥೆ ಹೀಗೆ ಬಹುಮೂಲಗಳ ಪ್ರೇರಣೆ, ಪ್ರಭಾವಗಳನ್ನು ಅರಗಿಸಿಕೊಂಡ ಹೊಸ ರಾಮಾಯಣ. ರಂಗಕ್ಕೂ ಅನ್ವಯವಾಗುವ ಮಾದರಿಯದ್ದು.

ಆಕರ ಪರಿಶೀಲನೆಗೆ ಸಂಬಂಧಪಟ್ಟಂತೆ ಖಚಿತವಾಗಿ ಕವಿ ಇದೇ ಮೂಲಗಳಿಂದ ಕತೆ, ಘಟನೆ, ಆಶಯ, ಅಭಿವ್ಯಕ್ತಿ ಕ್ರಮಗಳನ್ನು ಸ್ವೀಕರಿಸಿದ್ದಾನೆ ಎಂದು ಹೇಳುವುದು ಕಷ್ಟ. ಅದಕ್ಕೆ ಕಾರಣಗಳು ಹಲವು. ಪ್ರಭಾಕರ ಜೋಷಿಯವರು ಇದನ್ನು ಸರಿಯಾಗಿಯೇ ಗುರುತಿಸಿದ್ದಾರೆ; 'ಒಂದು ಕೃತಿಯೊಂದರ ಕಾಲದಲ್ಲಿ, ಒಂದು ವಿಷಯವು ವ್ಯಾಪಕವಾಗಿ ಪ್ರಚಾರದಲ್ಲಿದ್ದು ಅದು ವಿಭಿನ್ನ ರಚನೆಗಳಲ್ಲಿ ಸ್ವತಂತ್ರವಾಗಿಯೇ ಪ್ರಭಾವ ಬೀರುವ ಸಾಧ್ಯತೆಯಿದೆ. ಅಂತೆಯೇ 'ಕವಿಯು ಯಾವುದನ್ನು ಎಲ್ಲಿಂದ ಗ್ರಹಿಸಿದನೆಂದು ನಿರ್ಣಯಿಸಲು ಸಾಧ್ಯವಾಗದಷ್ಟು ಮೂಲಗಳು ಅದಕ್ಕೆ ಗೋಚರಿಸುವುದು. ತೊರವೆ ರಾಮಾಯಣ, ಹನೂಮದ್ರಾಮಯಣ, ಕೌಶಿಕ ರಾಮಾಯಣ, ಕಥಕ್ಕಳಿ ಪ್ರಸಂಗ ಇವುಗಳಲ್ಲೆಲ್ಲಾ ಒಂದು ವಿಚಾರವು ಇದ್ದಾಗ ಯಕ್ಷಗಾನ ಕವಿ ಅದನ್ನು ಎಲ್ಲಿಂದ ಗ್ರಹಿಸಿದ ಎಂದು ನಿರ್ಧರಿಸುವುದು ಕಷ್ಟ' (ವಾಲ್ಮೀಕಿ ರಾಮಾಯಣ ಮತ್ತು ಪರಂಪರೆ, ಪು. ೫೮–೫೯) ಆದರೂ ಯಾವ ಯಾವ ಮೂಲಗಳ ಪ್ರೇರಣೆಯನ್ನು ಪಾರ್ತಿಸುಬ್ಬ ಪಡೆದಿರಬಹುದೆಂಬ ಶೋಧನೆಯನ್ನು ಮಾಡುವ ಪ್ರಯತ್ನ ಇಲ್ಲಿನದು. ಸಂಪೂರ್ಣ ರಾಮಾಯಣದ ಕಥೆಯನ್ನು ಎಂಟು ಯಕ್ಷಗಾನ ಪ್ರಸಂಗಗಳಲ್ಲಿ ಒಳಗೊಳಿಸಿದ ಕವಿ ಪಾರ್ತಿಸುಬ್ಬ ಈಗಾಗಲೇ ಸೂಚಿಸಿದಂತೆ ಹಲವು ಮೂಲಗಳಿಂದ ಪ್ರಭಾವಕ್ಕೆ ಒಳಗಾಗಿದ್ದಾನೆ. ಅದರಲ್ಲಿ ಮುಖ್ಯವಾದುದು ರಾಮನಾಟ್ಟಂ ಪ್ರಸಂಗಗಳು ಇದನ್ನು ಕುಕ್ಕಿಲ ಕೃಷ್ಣ ಭಟ್ಟರು ಹಲವು ಲೇಖನಗಳಲ್ಲಿ ಉಲ್ಲೇಖಿಸಿದ್ದಾರೆ. ಕುಕ್ಕಿಲರು ಸಂಪಾದಿಸಿದ ಪಾರ್ತಿಸುಬ್ಬನ ಯಕ್ಷಗಾನಗಳು ಕೃತಿಯ ಮುನ್ನುಡಿಯಲ್ಲಿ ಇದನ್ನು ಗಮನಿಸಬಹುದು.

ಪಾರ್ತಿಸುಬ್ಬನ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿರುವುದು 'ರಾಮನಾಟ್ಟಂ' ಎಂಬ ಕಲಾಪ್ರಕಾರ. ಕೃಷ್ಣನಾಟ್ಟಂನಿಂದ ಕೇರಳದ ಪ್ರಸಿದ್ಧ ಕಲೆಯಾದ ಕಥಕ್ಕಳಿಗೆ ಪ್ರವೇಶಿಸುವ ಮುನ್ನ 'ರಾಮನಾಟ್ಟಂ' ಎಂಬ ಹೊಸ ಕಲೆಯೊಂದು ಕಾಣಿಸುತ್ತದೆ. ರಾಮನಾಟ್ಟಂನ ಹುಟ್ಟಿನ ಕುರಿತು ಒಂದು ದಂತಕತೆಯಿದೆ. ಕೊಟ್ಟಾರಕರ ವೇಟತ್ತು ತಂಬುರಾನ್ ಮಹಾರಾಜ ದಕ್ಷಿಣ ಕೇರಳದ ತನ್ನ ಕೊಟ್ಟಾರಕರ ಅರಮನೆಯಲ್ಲಿ ಉತ್ಸವ ಕಾಲದಲ್ಲಿ ಕೃಷ್ಣನಾಟ್ಟಂ ಪ್ರದರ್ಶಿಸಬೇಕೆಂಬ ಹಂಬಲದಿಂದ ಮಾನದೇವ ಅರಸನಿಗೆ ಆಹ್ವಾನಿಸಿದನಂತೆ. ಆದರೆ ಮಾನದೇವನು ತನ್ನ ಕೃಷ್ಣನಾಟ್ಟಂ ಕಲೆಯನ್ನು ಅರ್ಥಮಾಡಿಕೊಳ್ಳುವ ಶಕ್ತಿ ಕೊಟ್ಟಾರಕ್ಕರ ರಾಜನಿಗಾಗಲೀ ಪ್ರಜೆಗಳಿಗಾಗಲೀ ಇಲ್ಲ ಎಂದು ಹೇಳಿ ಆಹ್ವಾನವನ್ನು ತಿರಸ್ಕರಿಸಿದನಂತೆ. ಇದರಿಂದ ಅವಮಾನಿತನಾದ ಕೊಟ್ಟಾರಕರ ಮಹಾರಾಜನು ಅಂತಹುದೇ ಒಂದು ಕಲೆಯನ್ನು ರೂಪಿಸುವುದೇ ಸರಿಯಾದ ಮಾರ್ಗವೆಂದು ಬಗೆದನು. ಕೃಷ್ಣನಿಗೆ ಸರಿಮಿಗಿಲಾದ ರಾಮನ ಕಥೆಯನ್ನು ಬರೆದು 'ರಾಮನಾಟ್ಟಂ' ಹೆಸರಿನಿಂದ ಪ್ರದರ್ಶಿಸಿದನು.

ಕೃಷ್ಣನಾಟ್ಟಂನಲ್ಲಿ ಮಾನದೇವ ರಾಜ ಎಂಟು ಕೃಷ್ಣ ಕಥೆಯ ಪ್ರಸಂಗಗಳನ್ನು ಸಂಸ್ಕೃತದಲ್ಲಿ ಬರೆದಂತೆಯೇ ಅದೇ ಆದರ್ಶವನ್ನಿಟ್ಟುಕೊಂಡು ರಾಮನಾಟ್ಟಂ ಕಲಾರೂಪಕ್ಕಾಗಿಯೇ ಬಾಲ ಕೇರಳವರ್ಮ ಮಲಯಾಳಂನಲ್ಲಿ ರಾಮಕತೆಯನ್ನು ಒಳಗೊಂಡ ಎಂಟು ರಾಮಾಯಣ ಪ್ರಸಂಗಗಳನ್ನು ರಚಿಸಿದ.

೧. ಪುತ್ರಕಾಮೇಷ್ಠಿ,
೨. ಸೀತಾಸ್ವಯಂವರಂ,
೩. ವಿಚ್ಛಿನ್ನಾಭಿಷೇಕಂ,
೪. ಖರವಧ,
೫. ಬಾಲಿವಧ,
೬. ತೋರಣ ಯುದ್ಧಂ,
೭. ಸೇತುಬಂಧನಂ,
೮. ಯುದ್ಧಂ

– ಎಂಬ ಎಂಟು ಪ್ರಸಂಗಗಳನ್ನು ರಚಿಸಿದ. ಪಾರ್ತಿಸುಬ್ಬ ರಾಮಾಯಣ ಸಂಬಂಧಿಸಿದ ಎಂಟು ಯಕ್ಷಗಾನ ಪ್ರಸಂಗಗಳನ್ನು ರಚಿಸುವುದಕ್ಕೆ ರಾಮನಾಟ್ಟಂನ ಈ ರಚನೆಗಳೇ ಪ್ರೇರಣೆ. ರಾಮನಾಟ್ಟಂನ ಪ್ರಸಂಗಗಳ ದಟ್ಟವಾದ ಪ್ರಭಾವವನ್ನು ನಾವು ಪಾರ್ತಿಸುಬ್ಬನ ರಚನೆಗಳಲ್ಲಿ ಕಾಣಬಹುದಾಗಿದೆ. ಕೆಲವು ಉದಾಹರಣೆಗಳನ್ನು ಗಮನಿಸುವುದಾದರೆ; ರಾಮನಾಟ್ಟಂನ ಪುತ್ರಕಾಮೇಷ್ಠಿಯಲ್ಲಿ

**ನೃಪತೇ ಮಹಾಭಾಗ ದಶರಥ ನೃಪತೇ**
**ಪುತ್ರಕಾಮೇಷ್ಠಿ ಚೆಯ್ದುಕೊಂಡಿದಾನೀಂ**
**ಅತ್ರ ನಿನ್ಮನೋರಥಂ ಸಾಧಿಕ್ಕುಮಲ್ಲೋ**
**ಪುತ್ರರ್ ನಾಲು ಪೇರುಂಡಾಮಿನಿನಕ್ಕುಡನೆ**

ಚಿತ್ತ ಪೀಡಯೆನ್ನಿಯೆ ಸ್ವೈರಮಾಯ್ ಬಾಳಾಂ (ಕುಕ್ಕಿಲ ಸಂಪುಟ, ೧೯೮೮, ಪು.೧೫೧)

ಎಂಬ ಪದ್ಯ ಪಾರ್ತಿಸುಬ್ಬನಲ್ಲಿ

**ನೃಪತೇ ಮಹಾಭಾಗ ದಶರಥ ನೃಪತೇ**
**ಪುತ್ರಕಾಮೇಷ್ಟಿಯ ನೀನು ಮಾಡಿದುದರಿಂದ**
**ಇತ್ತ ನಿನ್ನಯ ಮನೋರಥ ಸಿದ್ಧಿಸೀತು**
**ಪುತ್ರರು ನಾಲ್ವರುದಿಸುವರು ಲಾಲಿಸು**
**ಚಿತ್ತಚಂಚಲ ಬಿಟ್ಟು ಸುಖವಾಗಿ ಬಾಳು ಎಂದು ಬಂದಿದೆ.**

**ಮಂಥರೆಯ ಮಾಯೆಗೆ ಸಿಕ್ಕ ಕೈಕೆಯ ಪ್ರತಿವಚನ ರಾಮನಾಟ್ಟಂನಲ್ಲಿ**
**ಸಖಿ ನೀ ಚೊನ್ನದು ಕೇಟ್ಟು ಸಕಲವು ಮರಿಂಞು ಞಾನ್**
**ಸಹಿಯಾಯಿ ತೊಟ್ಟುಂತನ್ನೆ ಸಂತತಂ ಚಿಂತಿಕ್ಕುಂ ತೋರುಂ**
**ಕಿಂತು ಕಾಂತನ್ ಮುನ್ನ ತವತನ್ನುವಲ್ಲೊರಂಡುವರಂ**

ಎಂದಿವಿನ್ನು ಖೇದಿಕ್ಕುನ್ನು ಎನ್ನದಿನೇ ಚೋದಿಚ್ಚಾಲ್ (ಕುಕ್ಕಿಲ ಸಂಪುಟ, ೧೯೯೮, ಪು.೧೫೪)

ಪಾರ್ತಿಸುಬ್ಬನಲ್ಲಿ

**ಸಖಿ ನೀ ಪೇಳಿದ ಮಾತು ಸಕಲವು ಲೇಸಾಯ್ತು**
**ಯುಕುತಿ ಏನಿದಕಿನ್ನು ಎನ್ನೊಳು ಪೇಳು ಕಂಡುದನ್ನು**
**ಹಿಂದೆ ಮೆಚ್ಚಿ ನಿನಗೆ ಆ ನರೇಂದ್ರ ಕೊಟ್ಟ ಮಾತೆರಡ**
**ಇಂದು ಕೇಳು ಕೊಟ್ಟ ಮೇಲೆ ಮುಂದೆ ಕೇಳು ಕಾರ್ಯ ಬಾಲೆ**

ಹೀಗೆ ರಾಮನಾಟ್ಟಂನ ನೆರಳಿನಂತಿರುವ ಅನೇಕ ಪದ್ಯಗಳನ್ನು ನಾವು ಗುರುತಿಸಬಹುದಾಗಿದೆ. ಈ ಬಗೆಗೆ ಸಾಕಷ್ಟು ಉದಾಹರಣೆಗಳನ್ನು ಕುಕ್ಕಿಲ ಕೃಷ್ಣ ಭಟ್ಟರು ವಿವರಿಸಿದ್ದಾರೆ.

ರಾಮನಾಟ್ಟಂನ ರಾಮಕಥಾ ಪ್ರಬಂಧ, ರಂಗ ಸ್ವರೂಪಗಳನ್ನು ತೆಂಕುತಿಟ್ಟು ಯಕ್ಷಗಾನದ ಮಾದರಿಯಾಗಿ ಪಾರ್ತಿಸುಬ್ಬ ಸ್ವೀಕರಿಸಿದಂತೆ ತೋರುತ್ತದೆ. ಕುಕ್ಕಿಲ ಕೃಷ್ಣ ಭಟ್ಟರು ಕಥಕಳಿಯ ಪ್ರಭಾವ ಎಂದು ಹೇಳಿದ್ದರು. ಆದರೆ ಅದು ಕಥಕಳಿ ರೂಪುಗೊಳ್ಳುವ ಪೂರ್ವದ ರಾಮನಾಟ್ಟಂನ್ನೂ ಕುರಿತು ಹೇಳಿದ ಮಾತು ಎನಿಸುತ್ತದೆ. ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ಕಥಕಳಿಯ ಗಾಢ ಪ್ರಭಾವವಿದೆಯೆಂದು ಅವರು ಉಲ್ಲೇಖಿಸುವ ಕಥಕಳಿಯ ಪ್ರಸಂಗ ಪದ್ಯಗಳು ರಾಮನಾಟ್ಟಂನ ಪದ್ಯಗಳೇ ಆಗಿವೆ.

ಕಥಕ್ಕಳಿಯ ಪೂರ್ವರೂಪವಾದ ರಾಮನಾಟ್ಟಂನ ಸಂಕ್ಷಿಪ್ತ ವಾಚಿಕವನ್ನು ವಿಸ್ತರಿಸಿ, ರಾಮನಾಟ್ಟಂನ ಪ್ರಸಂಗ ಪಠ್ಯವನ್ನೇ ಆದರ್ಶವಾಗಿಟ್ಟುಕೊಂಡು ತೆಂಕುತಿಟ್ಟು ಯಕ್ಷಗಾನಕ್ಕೆ ಶಾಸ್ತ್ರೀಯ ರಂಗಕಲೆಯ ರೂಪವನ್ನು ಕೊಡಲು ಪಾರ್ತಿಸುಬ್ಬ ಪ್ರಯತ್ನಿಸಿದ. ಅದೇ ಕಾಲಕ್ಕೆ ರಾಮನಾಟ್ಟಂನ ಪರಿಷ್ಕೃತ ರೂಪವಾದ ಕಥಕ್ಕಳಿ ಪ್ರದರ್ಶನಗಳು ಆರಂಭಗೊಂಡಿದ್ದವು. ಪಾರ್ತಿಸುಬ್ಬ ಆ ಪ್ರದರ್ಶನಗಳನ್ನೂ ಗಮನಿಸಿ ಅಲ್ಲಿನ ವೇಷಭೂಷಣ, ಬಣ್ಣಗಾರಿಕೆ ಇತ್ಯಾದಿಗಳನ್ನು ಯಕ್ಷಗಾನಕ್ಕೆ ತಂದಿದ್ದಾನೆ.

ತೊರವೆ ನರಹರಿಯ ತೊರವೆ ರಾಮಾಯಣದ ಅನೇಕ ಪದ್ಯಗಳು ಪಾರ್ತಿಸುಬ್ಬನ ಪ್ರಸಂಗದಲ್ಲಿ ರೂಪಾಂತರಗೊಂಡು ಬಂದಿವೆ. ಬಿಜಾಪುರದ ಸಮೀಪದ ತೊರವೆಯ ನರಹರಿಯ ಭಕ್ತನಾದ ಕುಮಾರವಾಲ್ಮೀಕಿಯ ನಿಜ ನಾಮಧೇಯ ತಿಳಿಯದು. ಆತನ

ಕಾಲವೂ ಸ್ಪಷ್ಟವಲ್ಲ. ಕುಮಾರವ್ಯಾಸನ ಪ್ರಭಾವ ಇವನ ಮೇಲಿದೆ. ಕುಮಾರವ್ಯಾಸನ ಕಾವ್ಯ ಹಾಗೂ ಮಧ್ವಾಚಾರ್ಯರ ತತ್ವಗಳಿಂದ ಪ್ರಭಾವಿತನಾಗಿರುವ ಭಕ್ತ ಕವಿ ಈತ. ಹಲವು ಬಾಹ್ಯ ಆಧಾರಗಳನ್ನು ಪರಿಗಣಿಸಿ ಈತನ ಕಾಲವನ್ನು ಸಾಹಿತ್ಯ ಚರಿತ್ರಕಾರರು ಕ್ರಿ.ಶ. ಸು ೧೪ ನೇ ಶತಮಾನ ಎಂದು ಗುರುತಿಸಿದ್ದಾರೆ. ಪಾರ್ತಿಸುಬ್ಬನ ಮೇಲೆ ಈ ಕೃತಿಯ ಪ್ರಭಾವ ದಟ್ಟವಾಗಿದೆ.

ಉದಾಹರಣೆ ಗಮನಿಸುವುದಾದರೆ ಸೇತು ಬಂಧನ ಪ್ರಸಂಗದಲ್ಲಿ

**ಹೆಣ್ಣ ನೆವನ ಹಿಡಿದು – ನಮ್ಮೆಲ್ಲರ**
**ಮಣ್ಣಿಗಿಕ್ಕುವ ಬಡಿದು ನಾವಿ**
**ನ್ನೀಣ್ಣದುರಿಯಲು ಬೇಡ ಸೀತೆಯನಿತ್ತು ಬದುಕೆಂದ**

ಎಂಬ ರಾವಣನಿಗೆ ವಿಭೀಷಣ ಹೇಳುವ ನೀತಿ ಹೇಳುವ ಭಾಗದ ಪದ್ಯವು 'ತೊರವೆ ರಾಮಾಯಣ'ದಲ್ಲಿ ಹೀಗಿದೆ;

**ಹೆಣ್ಣ ನೆವದಲಿ ನಮ್ಮನೆಲ್ಲರ**
**ಮಣ್ಣಿಗಿಕ್ಕುವ ಬಡಿದು ನಾವಿ**
**ನ್ನೀಣ್ಣುದುರಿಯಲು ಬೇಡ ಸೀತೆಯನಿತ್ತು ಬದುಕೆಂದ**

ಇನ್ನು ಸೇತುಬಂಧನ ಸಂದರ್ಭದಲ್ಲಿ ಜಾಂಬವ ಪರ್ವತವನ್ನು ಕಿತ್ತು ತರುವ ಸಾಹಸ ವರ್ಣನೆಯ ಪದ್ಯ ಪಾರ್ತಿಸುಬ್ಬನಲ್ಲಿ

**ನೆಗಹಿ ಜೋಲುವ ಜೂಲುಗೂದಲನಗಲಿಸಿ**
**ಮಿಗೆ ತುದಿ ಮೊದಲ ನೋಡಿದರೆ ಅಜ್ಜಯ್ಯ**
**ನೆಗಹಲು ಚೈತನ್ಯವಿಲ್ಲ ವೃದ್ಧರು ನಾವು**
**ನಗುವವರ್ನಕ್ಕರೆ ನಗಲೆಮಗಿದೇ ಸಾಕೆಂದು ಮಂಡಿಸಿದ**

ಇದೇ ಸಂದರ್ಭ 'ತೊರವೆ ರಾಮಾಯಣ'ದಲ್ಲಿ

**ನೆಗಹಿ ಜೋಲುವ ಜೂಲುಗೂದಲ**
**ನಗಲಿಸುತ ನೋಡಿದನು ಕಂಡನು**
**ನಗಕುಲೇಂದ್ರನ ಶಿಶಿರಸಾಂದ್ರನ ಪಾರ್ವತೀಪಿತನ**
**ಹೋಗುವಡುತ್ತರ ಪಥಕೆ ಚೈತ**
**ನ್ಯಗಳು ನಮಗಿಲ್ಲವು ಸುವೃದ್ಧರು**
**ನಗುವವರು ನಗಲೆಮಗಿದೇ ಸಾಕೆಂದು ಮಂಡಿಸಿದ ಎಂದು ಬಂದಿದೆ.**

‘ಅಂಗದ ಸಂಧಾನ’ದ ಪಾರ್ತಿಸುಬ್ಬನ ಪದ್ಯ;

**ತಡೆದ ಬಾಗಿಲ ಭಟರ ಮಂಡೆಯ**
**ಹೊಡೆದನಾನಂಕುಳಿನ ಮರನಲಿ**
**ಸಡಗರದೊಳೊಳಹೊಕ್ಕ**

ಎಂಬುದು ತೊರವೆ ರಾಮಾಯಣದಲ್ಲಿ

**ತಡೆದ ಬಾಗಿಲು ಬಾಗಿಲುಗಳು**
**ಗ್ಗಡದ ಖಳರನು ಹೆಮ್ಮರದ ಹೆ**
**ಬ್ಬುಡದಲೆರಗುತ ಹೊಕ್ಕ..**

– ಎಂದಿದೆ. ಹೀಗೆ ಅನೇಕ ಉದಾಹರಣೆಗಳನ್ನು ನೀಡಬಹುದು. ಆರಂಭದ ರಾಮಾಯಣ ಪ್ರಸಂಗಗಳಲ್ಲಿ ಪಂಚವಟಿಯ ತನಕ ಪಾರ್ತಿಸುಬ್ಬನ ಪ್ರಸಂಗಗಳಲ್ಲಿ ರಾಮನಾಟ್ಟಂನ ಪ್ರಭಾವ ಹೆಚ್ಚಾಗಿ ಕಂಡುಬಂದರೆ ಅನಂತರದ ರಾಮಾಯಣ ಪ್ರಸಂಗಗಳಲ್ಲಿ ತೊರವೆ ರಾಮಾಯಣದ ಪ್ರಭಾವವನ್ನು ಗಮನಿಸಬಹುದಾಗಿದೆ. ಬಹುಷಃ ರಾಮನಾಟ್ಟಂ ಪ್ರಸಂಗಗಳಲ್ಲಿ ಸಂವಾದಕ್ಕೆ ವಿಶೇಷ ಅವಕಾಶ ಇಲ್ಲದೇ ಇರುವುದರಿಂದ ತೊರವೆಯ ಕಾವ್ಯದಲ್ಲಿ ಸಂವಾದ ಶೈಲಿ ಚೆನ್ನಾಗಿ ಪ್ರಕಟಗೊಂಡಿರುವುದರಿಂದ ಯಕ್ಷಗಾನ ಪ್ರದರ್ಶನಕ್ಕೆ ಇದೇ ಹೆಚ್ಚು ಸೂಕ್ತವೆಂದು ಪಾರ್ತಿಸುಬ್ಬ ಭಾವಿಸಿದ್ದಿರಬೇಕು.

ಪಾರ್ತಿಸುಬ್ಬ ಪ್ರಸಂಗ ರಚನೆಯ ಸಂದರ್ಭದಲ್ಲಿ ಈ ಎರಡೂ ಆಕರಗಳನ್ನು ಆಶ್ರಯಿಸಿದ್ದಾನೆ. ರಾಮನಾಟ್ಟಂ ಪ್ರಸಂಗಗಳ ಪ್ರಭಾವ ಆಗಿರುವುದನ್ನು ಈಗಾಗಲೇ ಉದಾಹರಣೆ ಸಹಿತ ವಿವರಿಸಲಾಗಿದೆ. ಆದರೆ ಯಾವ ಭಾಗವನ್ನು ತೊರವೆ ರಾಮಾಯಣದಿಂದ ಸ್ವೀಕರಿಸಿರುತ್ತಾನೋ ಅದು ರಾಮನಾಟ್ಟಂ ನಲ್ಲಿ ಇರುವುದಿಲ್ಲ. ಕುಕ್ಕಿಲ ಕೃಷ್ಣ ಭಟ್ಟ (ಪಾರ್ತಿಸುಬ್ಬನ ಯಕ್ಷಗಾನಗಳು, ೨೦೦೯, ಮುನ್ನುಡಿ) ಮತ್ತು ಪು ಶ್ರೀನಿವಾಸ ಭಟ್ಟ ಕಟೀಲು ( ಪಾರ್ತಿಸುಬ್ಬ ಕೆಲವು ವಿಚಾರಗಳು, ೧೯೭೮, ಪು. ೨೩) ಇವರು ಈ ಅಂಶವನ್ನು ಗುರುತಿಸಿದ್ದಾರೆ. “ ‘ಉಂಗುರ ಸಂಧಿ’ಯಲ್ಲಿ ಹನುಮಂತನು ಲಂಕೆಗೆಂದು ಸಮುದ್ರವನ್ನು ಹಾರಿದವನು ಗುರಿ ಮೀರಿ ಲಂಕಾ ಪಟ್ಟಣದಿಂದ ಏಳುನೂರು ಯೋಜನ ಮುಂದೆ ತೃಣಬಿಂದು ಮುನಿಪನ ಆಶ್ರಮಕ್ಕೆ ಬಂದಿಳಿದನೆಂದು ತೊರವೆ ರಾಮಾಯಣದಲ್ಲಿರುವಂತೆ ಸುಬ್ಬನು ಗ್ರಹಿಸಿಕೊಂಡಿದ್ದಾನೆ. ಕಥಕ್ಕಳಿ ರಾಮಾಯಣದಲ್ಲಿ ಈ ವಿಚಾರ ವಿರುವುದಿಲ್ಲ. ಸುಬ್ಬನ ಪಂಚವಟಿಯಲ್ಲಿ ಕಾಣುವ ಶೂರ್ಪನಖಿಯ ಕುಚಚ್ಛೇದನದ ವಿಚಾರವನ್ನು ಆತನು ಕಥಕ್ಕಳಿ ರಾಮಾಯಣದಿಂದಲೇ ಸ್ವೀಕರಿಸಿದ್ದು ಹೊರತು ತೊರವೆ ರಾಮಾಯಣದಲ್ಲಿ ಆ ಸಂಗತಿ ಬರುವುದಿಲ್ಲ”

ಸೀತಾಪಹರಣದ ಬಳಿಕ ರಾಮನ ವಿರಹ ವೇದನೆಯ ಮಾತುಗಳು, ಪಟ್ಟಾಭಿಷೇಕ ಸಂದರ್ಭದಲ್ಲಿನ 'ಹೊಕ್ಕಳು ಮಾಯದಿ ಹೃದಯವ ರಕ್ಕಸಿ ಕದಡಿದಳು ಕೈಕೆಯಂತ:ಕರಣಂ' ಎಂಬ ವಿಚಾರವು ತೊರವೆ ರಾಮಾಯಣದಲ್ಲಾಗಲೀ, ವಾಲ್ಮೀಕಿ ರಾಮಾಯಣದಲ್ಲಾಗಲೀ ಇಲ್ಲ. ಅದನ್ನು ಪಾರ್ತಿಸುಬ್ಬ ರಾಮನಾಟ್ಟಂ ಪ್ರಬಂಧಗಳಿಂದ ಸ್ವೀಕರಿಸಿರಬೇಕು. ಪಾರ್ತಿಸುಬ್ಬನು ರಾಮಾಯಣದಲ್ಲಿ ವಾಲ್ಮೀಕಿ ರಾಮಾಯಣವನ್ನೂ ರಾಮನಾಟ್ಟಂ ಪ್ರಬಂಧಗಳನ್ನೂ, ತೊರವೆ ರಾಮಾಯಣದ ಭಾಗಗಳನ್ನು ಅನುಸರಿಸಿದ್ದರೂ ಅನೇಕ ಕಡೆ ತನ್ನದೇ ಹೊಸತನ್ನು ಅಳವಡಿಸಿದ್ದಾನೆ.

ಸೀತಾಪಹರಣದ ಸಂದರ್ಭದಲ್ಲಿ ರಾಮನು ತಮ್ಮ ಲಕ್ಷ್ಮಣನೊಡನೆ ಹೇಳುವ

**ಪೊಡವಿಗಿಡ ಮರಕಲ್ಲ ನೋಡಿದರೆ ಅರಿಸಿನದ**
**ಪುಡಿಯಂತೆ ತೋರುತಿದೆ ತಮ್ಮಾ**
**ಮಡದಿ ಜಾನಕಿಯೆಂಬ ರತುನವನು**
**ಕಾಣದಡಿಯಿಡಲಾರೆನಯ್ಯಯ್ಯೋ ತಮ್ಮಾ**

**ಏಳು ಜನ್ಮಂತರಕು ತಪವಗೈದರೂ ಇಂಥ**
**ಬಾಲೆ ಕೈಸೇರುವಳೇ ತಮ್ಮಾ**
**ಮೇಲು ಕೀಳೊಂದನರಿಯದ ಸತಿಯ**

ದುರ್ನುಡಿಯ ಕೇಳಿ ನೀ ಬರಬಹುದೇ ತಮ್ಮಾ ಇಂತಹ ಸಂದರ್ಭಗಳಲ್ಲಿ ಪರಕಾಯ ಪ್ರವೇಶದ ತಾದಾತ್ಮ್ಯ ಕವಿ ಪಾರ್ತಿಸುಬ್ಬನನ್ನು ಕಾಣಿಸುತ್ತದೆ. ಇಂತಹ ಭಾಗಗಳಿಂದಲೇ ಪಾರ್ತಿಸುಬ್ಬನ ಪ್ರಸಂಗಗಳು ಸ್ವತಂತ್ರ ಕಾವ್ಯಾನುಭವವನ್ನು ಉಂಟುಮಾಡುತ್ತದೆ.

ಕ್ರಿ.ಶ ಸು. ೧೮೦೦ ರ ಕಾಲದ ಕವಿ ಬತ್ತಲೇಶ್ವರ ಬರದ ಕೌಶಿಕ ರಾಮಾಯಣವೂ ಸ್ವಲ್ಪಮಟ್ಟಿಗೆ ಪಾರ್ತಿಸುಬ್ಬನನ್ನು ಪ್ರಭಾವಿಸಿದೆ. ಈತನ ಮೇಲೆ ಕುಮಾರ ವಾಲ್ಮೀಕಿಯ ಪ್ರಭಾವವಿದೆ. ಪಂಚವಟಿ ಪ್ರಸಂಗದಲ್ಲಿ ಮಾಯಾಜಿಂಕೆಯನ್ನು ತರಲು ಹೋದ ರಾಮ ಅಪಾಯಕ್ಕೆ ಸಿಲುಕಿದನೆಂದು ದು:ಖಿಸಿ ಸೀತೆ ಲಕ್ಷ್ಮಣನನ್ನು ಕಳುಹಿಸಲು ಮುಂದಾಗುತ್ತಾಳೆ. ಆಗ ಲಕ್ಷ್ಮಣ ಮೊದಲಿಗೆ ಒಪ್ಪದೇ ಇರುವಾಗ ಸೀತೆ ಲಕ್ಷ್ಮಣನನ್ನು ಕುರಿತು ದುರ್ನುಡಿಗಳನ್ನಾಡುತ್ತಾಳೆ. ಆಗ ಲಕ್ಷ್ಮಣ 'ಭೂಮಿಯೊಳಗೇಳಾಜ್ಞೆಯಂ ಬರೆದಿದಂ ಮೀರದಿರೆಂದು' ಹೇಳಿ ಹೊರಡುತ್ತಾನೆ. ಈ ವಿಷಯ ತೊರವೆಯಲ್ಲಾಗಲೀ, ವಾಲ್ಮೀಕಿ ರಾಮಾಯಣದಲ್ಲಾಗಲೀ, ರಾಮನಾಟ್ಟಂನಲ್ಲಾಗಲೀ ಇಲ್ಲ. ಆದರೆ ಇದು ಬತ್ತಲೇಶ್ವರ ಕವಿಯ ಕೌಶಿಕ ರಾಮಾಯಣದಲ್ಲಿ ಇದೆ. 'ಗೆರೆಯ ದಾಟದಿರೆನುತ ಪುಂಡರೀಕದಳಾಕ್ಷಿ ಮರೆದಾಗೆರೆಯ ದಾಟಿದಳು' ಎಂದಿದೆ. ಈ ಗೆರೆಯ ಪ್ರಸ್ತಾಪ ಸೊಗಸಾದ ಜಾನಪದ

ನಂಬಿಕೆಯೊಂದರ ಅಭಿವ್ಯಕ್ತಿಯಂತೆ ಇದ್ದು ರಂಗದಲ್ಲಿ ಅಭಿನಯಕ್ಕೆ ಸಾಕಷ್ಟು ಅವಕಾಶಗಳನ್ನು ಕಲ್ಪಿಸಿದೆ.

ಪಂಚವಟಿಯ ಮಾಯಾಮೃಗ ಪ್ರಕರಣದಲ್ಲಿ ಸೀತೆಯ ಕಠಿಣತರವಾಕ್ಯದಿಂದ ಲಕ್ಷ್ಮಣನು ರಾಮನನ್ನು ಹುಡುಕುತ್ತಾ ತೆರಳಲೇ ಬೇಕಾದ ಪ್ರಸಂಗವೊದಗುತ್ತದೆ. ಆಗ ಲಕ್ಷ್ಮಣನು 'ಭೂಮಿಯೊಳಗೇಳಾಜ್ಞೆಯಂ ಬರೆದಿದರ ಮೀರಿ ಅಡಿಯಿಡದಿರು' ಎಂದು ಹೇಳಿದ ವಿವರ ಪಾರ್ತಿಸುಬ್ಬನ ಪ್ರಸಂಗದಲ್ಲಿ ಬರುತ್ತದೆ ಎಂಬುದನ್ನು ಈಗಾಗಲೇ ಚರ್ಚಿಸಲಾಗಿದೆ. ಈ ವಿವರ ವಾಲ್ಮೀಕಿ ರಾಮಾಯಣದಲ್ಲಾಗಲೀ, ರಾಮನಾಟ್ಟಂ ಪ್ರಬಂಧಗಳಲ್ಲಾಗಲೀ ಇಲ್ಲ. ಆದರೆ ಮಹಾನಾಟಕವೆಂದು ಪ್ರಸಿದ್ಧವಾದ ಆಂಜನೇಯ ರಚಿತ ಹನೂಮನ್ನಾಟಕದಲ್ಲಿ ಈ ಪ್ರಸಂಗವಿದೆ ಎಂದು ಕುಕ್ಕಿಲರು ಗುರುತಿಸಿದ್ದಾರೆ.

**ರಾಮಂ ಕಾಮಾಭಿರಾಮಂ ನಿಶಿತಶರಧನುರ್ಧಾರಿಣಂ ಲಕ್ಷ್ಮಣೇನ**
**ಕ್ಷ ಪ್ರಂತದ್ರಕ್ಷಣಾಯೋಲ್ಲಿಖಿತ ತಟಭುವಾ ಸೋಪ್ಯಗಾತ್ತದ್ವಧಾಯ**
**ಸವ್ಯಾಹರದ್ಧರ್ಮಿಣಿ ದೇಹಿ ಭಿಕ್ಷಾಮಲಂಘಯಲ್ಲಕ್ಷ್ಮಣ ಲಕ್ಷ್ಮಲೇಖಾಂ**

ಕಪಟ ಸನ್ಯಾಸಿಗೆ ಭಿಕ್ಷೆಯನ್ನು ನೀಡುವಾಗ ಸೀತೆಯು ಲಕ್ಷ್ಮಣನ ಗೆರೆಯನ್ನು ಮೀರದಂತೆ ವರ್ಣಿಸಿರುವ ಮಹಾನಾಟಕದ ಶ್ಲೋಕವಿದು. (ಕುಕ್ಕಿಲ ಸಂಪುಟ, ಪು.೧೮೦)

**ಕಾಮಿನಿಯ ಕಠಿಣತರ ವಾಕ್ಯಮಂ ಕೇಳ್ದು ಶ್ರೀ**
**ರಾಮ ರಾಮಾಯೆಂದು ಕಿವಿಗಳೆರಡಂ ಮುಚ್ಚಿ**
**ಭೂಮಿಯೋಳಗೇಳಾಣೆಯಂ ಬರೆದಿದರ ಮೀರಿ ಅಡಿಯಿಡದಿರೆಂದುಸಿರ್ದು ...**

(ಪಾರ್ತಿಸುಬ್ಬನ ಪ್ರಸಂಗಗಳು, ಪು. ೧೪೭)

**ನಾನಾ ಪ್ರಕಾರದಲಿ ಖಳ ಕಪಟವಂ ನುಡಿದು**
**ಮಾನಿನಿಯ ಮನದ ಸಂಶಯ ನಿವಾರಿಸಲಾಗ**
**ಏನು ಬಂದರು ಬರಲಿಯೆಂದಾಜ್ಞೆಯಂ ದಾಂಟಿ ಸೀತೆ ಮುಂದಡಿಯಿಡಲ್ಕೆ**

(ಪಾರ್ತಿಸುಬ್ಬನ ಪ್ರಸಂಗಗಳು, ಪು. ೧೪೮)

ಈ ಪ್ರಸಂಗದಲ್ಲಿ ಪಾರ್ತಿಸುಬ್ಬ ಹನೂಮನ್ನಾಟಕದ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದಾಗಿದೆ.

ಉಪಮಾಲೋಲ, ನಾದಲೋಲ ಎಂಬ ಪ್ರಶಂಸೆಗೆ ಪಾತ್ರನಾಗಿರುವ ಲಕ್ಷ್ಮೀಶ ಕವಿಯ ಕನ್ನಡ ಜೈಮಿನಿ ಭಾರತದ ಸೀತಾಪರಿತ್ಯಾಗದ ರಾಮಾಯಣದ ಉತ್ತರಕಾಂಡಕ್ಕೆ ಸಂಬಂಧಿಸಿದ ಭಾಗ ಪಾರ್ತಿಸುಬ್ಬನ ಕುಶಲವರ ಕಾಳಗ ಪ್ರಸಂಗ ರಚನೆಯಲ್ಲಿ ಪ್ರಭಾವಿಸಿದೆ.

ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳಲ್ಲಿ ಇಂದ್ರಜಿತು ವಧೆವರೆಗಿನ ಕಥೆ ಮಾತ್ರ ಇದ್ದು ರಾವಣ ವಧೆಯ ವಿಚಾರ ಇಲ್ಲ. ರಾಮನಾಟ್ಟಂನಲ್ಲೂ ರಾವಣ ವಧೆಯ ವರ್ಣನೆ ಇಲ್ಲದಿರುವುದರಿಂದ, ರಂಗದಲ್ಲಿ ರಾಮ ರಾವಣ ಯುದ್ಧ ಸನ್ನಿವೇಶ ತರುವುದು ಸಲ್ಲದು ಎಂಬ ರೂಢಿಯ ನಂಬಿಕೆ ಆ ಕಾಲದಲ್ಲಿ ಇದ್ದುದರಿಂದ ಬಹುಷ: ಸುಬ್ಬ ಅದನ್ನು ಕೈಬಿಟ್ಟಿರಬೇಕು. ಆದರೆ ಆ ಬಳಿಕದ ಕುಶಲವರ ಕಾಳಗವನ್ನು ಕುರಿತ ಪ್ರಸಂಗವನ್ನು ರಚಿಸಿದ್ದಾನೆ. ಕುಶಲವರ ಕಾಳಗಕ್ಕೆ ಲಕ್ಷ್ಮೀಶ ಕವಿಯ ಕನ್ನಡ ಜೈಮಿನಿ ಭಾರತವೇ ಪ್ರಧಾನ ಆಕರವಾಗಿರುವಂತೆ ತೋರುತ್ತದೆ. ಕಥಾ ಹರಿವು ಮತ್ತು ಪದ್ಯ ನಿರೂಪಣೆಯಲ್ಲೂ ಈ ಪ್ರಸಂಗಕ್ಕೆ ಕನ್ನಡ ಜೈಮಿನಿ ಭಾರತ ಆದರ್ಶವಿರುವಂತೆ ತೋರುತ್ತದೆ. ಉದಾಹರಣೆಗೆ ಕೆಲವು ಪದ್ಯಗಳನ್ನು ಪರಿಶೀಲಿಸಬಹುದಾಗಿದೆ.

ಪಾರ್ತಿಸುಬ್ಬನ ಕುಶಲವರ ಕಾಳಗದಲ್ಲಿ

**ಕಯ್ಯಾರೆ ಖಡ್ಗವ ಕೊಟ್ಟು ತನ್ನರಸಿಯ**
**ಹೊಯ್ಯೆಂದು ಪೇಳದೆ ಬರಿದೆ**
**ಒಯ್ಯನೆ ಕಾಡೊಳು ಬಿಟ್ಟುಬಾರೆಂದೆನೆ**
**ಅಯ್ಯಯ್ಯೋ ರಾಮ ಕರುಣಾಳು**

ಸೀತೆಯನ್ನು ಲಕ್ಷ್ಮಣ ಕಾಡಿನಲ್ಲಿ ತ್ಯಜಿಸಿ ಬರುವ ಇದುವೇ ಸನ್ನಿವೇಶವು ಕನ್ನಡ ಜೈಮಿನಿ ಭಾರತದಲ್ಲಿ

**'ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ**
**ಹೊಯ್ಯೆಂದು ಪೇಳದಡವಿಗೆ ಕಳುಹಿಬಾರೆಂದ**
**ನಯ್ಯಯ್ಯೊ ರಾಘವಂ ಕಾರುಣ್ಯನಿಧಿಯೆಂದಳಲ್ದಳಂಭೋಜನೇತ್ರೆ' (ಜೈಮಿನಿ ಭಾರತ** ೧೯– ೧೭)

– ಎಂದಿದೆ. ಭಾವ ಮತ್ತು ನಿರೂಪಣೆಯ ಸಾಮ್ಯತೆಯನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಯುದ್ಧ ಸಂದರ್ಭದಲ್ಲಿ ಕುಶನ ಬಾಣಾಘಾತಕ್ಕೆ ಒಳಗಾದ ರಾಮನನ್ನು ಕುರಿತ ವರ್ಣನೆ ಪಾರ್ತಿಸುಬ್ಬನಲ್ಲಿ

**ಮಕ್ಕಳೊಡನೆ ರಾಮಚಂದ್ರ ದೇವಗೆ ಮನ**
**ದಕ್ಕರುಂಟೆಂಬುದನು**
**ಲೆಕ್ಕಿಪ ಬಗೆಯಂತೆ ಕುಶನಿಟ್ಟ ಶರ ಬಂದು ಹೊಕ್ಕಿತಂದೊಡಲೊಳಗೆ**

ಎಂದಿದ್ದರೆ, ಅದುವೇ ಪ್ರಸಂಗ ಕನ್ನಡ ಜೈಮಿನಿ ಭಾರತದಲ್ಲಿ

**ಪೊಕ್ಕವಂಬುಗಳೊಡಲೊಳಾತ್ಮಜರ ಮೇಲೆ ತನ**
**ಗಕ್ಕರುಂಟಿಲ್ಲೆಂಬುದಂ ನೋಳ್ಪೆನೆಂಬವೋಲ್**

ಎಂದಿದೆ. ಹೀಗೆ ಪಾರ್ತಿಸುಬ್ಬನು ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತದಿಂದ ಹಲವು ಅಂಶಗಳನ್ನು ಸ್ವೀಕರಿಸಿದ್ದಾನೆ.

ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗಗಳ ಮೇಲೆ ಮಧ್ಯಕಾಲದ ದಾಸಪರಂಪರೆ ಪ್ರಭಾವಿಸಿದ್ದನ್ನು ನಾವು ಗಮನಿಸಬಹುದು. ತೆಲುಗಿನ ಮೊದಲ ಯಕ್ಷಗಾನ ಕವಿಯೆಂದು ಪ್ರಸಿದ್ಧನಾದ ಕವಿ ರುದ್ರಯ್ಯ ತೆಲುಗು ಮತ್ತು ಕನ್ನಡ ಯಕ್ಷಗಾನ ಪ್ರಸಂಗಗಳಿಗೂ ಪ್ರಭಾವಿಸಿದ್ದಾನೆ ಎನ್ನಲಾಗಿದೆ. ಮಧ್ವಮತ ಪ್ರಭಾವಿಯಾಗಿದ್ದ ಈ ಕಾಲದಲ್ಲಿ ಯಕ್ಷಗಾನಕ್ಕೆ ಮಹತ್ವ ಪ್ರಾಪ್ತವಾದುದನ್ನು ಕಾಣಬಹುದು. ಹರಿಪಾರಮ್ಯದ ಪ್ರಚಾರಕ್ಕೆ ಯಕ್ಷಗಾನವನ್ನು ಬಳಸಿಕೊಂಡಿರಬೇಕು. ಯಕ್ಷಗಾನದ ಮೇಳಗಳಿಗೆ ದಶಾವತಾರ ಮೇಳಗಳೆಂದು ಹೆಸರು ಬಂದುದು ಇದೇ ಕಾರಣದಿಂದ ಇರಬೇಕು.

ಹಳೆಯ ಯಕ್ಷಗಾನ ಪ್ರಸಂಗಗಳ ಹಸ್ತಪ್ರತಿಗಳನ್ನು ಗಮನಿಸಿದರೆ ಅದರಲ್ಲಿ ಪದ್ಯಗಳಿಗೆ ರಾಗ ತಾಳಗಳನ್ನು ನಿರ್ದೇಶಿಸದೇ ಕೀರ್ತನೆವೊಂದರ ಸಾಲನ್ನು  ಬರೆದು .. ಹೀಗೆ ಹಾಡಬೇಕು ಎಂಬ ಸೂಚನೆ ಇರುತ್ತಿತ್ತು. ದಾಸ ಸಾಹಿತ್ಯದ ಪ್ರೇರಣೆ ಯಕ್ಷಗಾನಕ್ಕೆ ಧಾರಾಳವಾಗಿ ಇತ್ತು ಎಂಬುದನ್ನು ನಾವು ಗಮನಿಸಬಹುದು. ದಾಸ ಸಾಹಿತ್ಯದ ಎಷ್ಟೋ ಕೀರ್ತನೆಯ ಸಾಲುಗಳು ಈತನ ಪ್ರಸಂಗಗಳ ನಡುವೆ ನುಸುಳಿಕೊಂಡಿದೆ. ಉದಾಹರಣೆಗೆ ಪುರಂದರ ದಾಸರ ಕೀರ್ತನೆ

**ಏನುಮ್ಮಾ ರಾವಣ। ಏನುಮ್ಮಾ ಸೀತೆಯ ತಂದಿದ್ಯಾ ॥ಪ॥**
**ನಿನ್ನ ಬಳಿಗೆ ರಾಮ ಎನ್ನ ಕಳಿಸಿಕೊಟ್ಟ। ಇನ್ನಾದರೂ ಸೀತೆಯ ಬಿಡುವಿಯೇನ್ಮಾ॥**
**ಕಾಣದೆ ಹಾಗೆ ಕದ್ದು ತರಬಹುದೆ। ನನ್ನಿಂದ ತಪ್ಪೆಂದು ಹೊನ್ನ ।**
**ಕಾಣಿಕೆಯಿತ್ತು ಬೆನ್ನು ಮರೆಯಾಗಿ ನೀ ಹೋಗಬಾರದೇನು ಮ್ಯಾ ॥೧॥**
**ಶೂರ್ಪನಖಿಯ ಹುಚ್ಚು ಮಾತನು ಕೇಳಿ।**
**ಖರದೂಷಣರೇನಾದರು ಹೇಳುಮ್ಮಾ ॥೨॥**
**ಮಂಡೋದರಿ ಬಹಳ ಮಕ್ಕಳ ಪಡೆದಿದ್ದಾಳೆ ।**
**ಕಂಡವರ ತುತ್ತು ಮಾಡಬೇಡ ಕಾಣ್ ಮ್ಯಾ ॥೩॥**
**ಅವತಾರ ಮನುಜನಲ್ಲ ಪುರಂದರ ವಿಠಲ ।**
**ಶಿರವ ಹೊಯ್ದು ಒಯ್ಯುವನು ತಿಳಿಮ್ಯಾ ॥೪॥**

(ಪುರಂದರದಾಸರ ಕೀರ್ತನೆಗಳು – ಭಾಗ ೨, ಪು. ೮೨)

ಪಾರ್ತಿಸುಬ್ಬನ ಅಂಗದ ಸಂಧಾನ ಪ್ರಸಂಗದಲ್ಲಿ ಅಂಗದನು ರಾವಣನಿಗೆ ಬುದ್ದಿ ಹೇಳುವ ಪದ್ಯ ಈ ಕೀರ್ತನೆಯ ಅನುಕರಣೆಯಂತಿದೆ.

**ಏನ್ಮಾ್ಯ ರಾವಣ ನೀನ್ಮಾ್ಯ ಸೀತೆಯ**
**ಕಾಣದ ಹಾಂಗೆ ಕದ್ದು ತಂದೆಯೇನ್ಮಾ್ಯ**
**ತಾನಾಗಿ ರಾಮಚಂದ್ರ ಸೇನೆಯ ಕೂಡಿಕೊಂಡು**
**ನೀನಿಪ್ಪ ತಾವಗಾಗಿ ಬಂದ ಕಾಣ್ಮಾ್ಯ**

**ನಿನ್ನ ಬಳಿಗೆ ರಾಮ ಎನ್ನ ಕಳುಹಿಕೊಟ್ಟ**
**ಇನ್ನಾದರೂ ಸೀತೆಯ ಬಿಡುತೆಯೇನ್ಮಾ್ಯ**
**ಎನ್ನಿಂದ ತಪ್ಪಾತೆಂದು ಹೊನ್ನ ಕಾಣಿಕೆ ಕೊಟ್ಟು**
**ಬೆನ್ನಾಗ ಮರೆಯೊಕ್ಕು ಇರುತೇಯೇನ್ಮಾ್ಯ**

**ಮಂಡೋದರಿ ಭಾಳ ಮಕ್ಕಳ ಹೆತ್ತವಳೇ**
**ಕಂಡೋರ ಬಾಯ್ ಕುತ್ತ ಮಾಡೋಬೇಡ್ಮಾ್ಯ**
**ಬಂಡಾಟಕಿಕ್ಕಿ ಸಿಕ್ಕಿ ತಂಡ ತಂಡದೊಳಿಪ್ಪ**
**ಹೆಂಡಾರ ವಾಲೆ ಕಳಚಬೇಡ್ಮಾ್ಯ**

ಹೀಗೆ ಏಳು ಪದ್ಯಗಳು ನೇರ ಪುರಂದರದಾಸರ ಕೀರ್ತನೆಯನ್ನು ಹೋಲುತ್ತದೆ. ಸೇತುಬಂಧನ ಪ್ರಸಂಗದಲ್ಲಿ ವರುಣನನ್ನು ಪ್ರಾರ್ಥಿಸುವ ಸಂದರ್ಭದಲ್ಲಿ ಕಪಿಗಳೆಲ್ಲ ಧ್ಯಾನದಲ್ಲಿ ತೊಡಗುವ ಸನ್ನಿವೇಶವನ್ನು ವಿವರಿಸುವ ಪದ್ಯಗಳಲ್ಲಿ ಕೀರ್ತನೆಯ ಗುಣವನ್ನು ಗಮನಿಸಬಹುದು.

**'ಶರಣನೆಂದ ಮಾತ ಕೇಳಿ ಸರಿಯೆಂದರವರೆಲ್ಲ**
**ಶರಧಿರಾಜನೊಡನೆ ಬಟ್ಟೆ ಕೇಳ್ವುದೆಂಬ ಸೊಲ್ಲ'**

ಎಂಬ ಪಲ್ಲವಿಯೊಂದಿಗೆ ಆರಂಭಗೊಳ್ಳುವ ಈ ಪದ್ಯ ಕೀರ್ತನೆಯ ಸ್ವರೂಪವನ್ನು ಹೊಂದಿದೆ. ಮುಂದಿನ ಕಂಡಿಕೆಯಲ್ಲಿ ದಾಸ ಪರಂಪರೆಯ ಮಾಧ್ವರ ಚಿತ್ರಣವನ್ನೂ ಕಾಣಬಹುದು.

**ಬಂದು ಶೋಧಿಸಿ ಸುಸ್ಥಳವ ಮಿಂದು ಮಡಿಯನುಟ್ಟು**
**ಚಂದದಿಂದ ಹಣೆಗೆ ಗೋಪೀ ಚಂದನವನಿಟ್ಟು**
**ಒಂದೊಂದು ತುಳಸಿಯ ಸರವನಂದು ಕೊರಳಿಗಿಟ್ಟು..**

ಇಂತಹ ವಿವರಗಳು ನೇರ ಮಾಧ್ವ ಸಂಪ್ರದಾಯವನ್ನು ಸೂಚಿಸುತ್ತದೆ. ಗೋಪಿಯನ್ನು ಬಳಸುವುದು ಮಧ್ವಾಚಾರ್ಯರ ಅನುಯಾಯಿಗಳು. ಈ ಪದ್ಯದ ಮುಂದಿನ ಭಾಗವೂ ಅಧ್ಯಾತ್ಮದ ಚಿಂತನೆಗಳನ್ನು ಹೊಂದಿದ್ದು ಕೀರ್ತನೆಗಳ ಗುಣವನ್ನು ಹೊಂದಿದೆ. (ಪಾ.ಯ ಪು.೨೭೦)

ಶ್ರೀಕೃಷ್ಣ ಚರಿತೆ ಎಂಬ ಪ್ರಸಂಗದಲ್ಲಿ ಚಾಟುವಿಠಲನಾಥನ ಕನ್ನಡ ಭಾಗವತ ಮತ್ತು ದಾಸ ಸಾಹಿತ್ಯದ ಪ್ರಭಾವವಿರುವುದನ್ನು ಕಾಣಬಹುದಾಗಿದೆ. ದೇವಕಿಯ ಹಸ್ತಲಕ್ಷಣವನ್ನು ವಿವರಿಸುವಾಗ ಕೊರವಂಜಿಯು

**ಕೈಯ ತೋರಿಸೆ ನಾರಿಯರ ಮೌಕ್ತಿಕವೇ ನಿನ್ನ । ಕೈಯ ತೋರೆ ಬಲು**
**ಒಯ್ಯಾರದಿಂದಲಿ ರಾಜಿಸುತ್ತೊಲೆಯುವ । ಕೈಯ ತೋರೆ**

ಎಂಬ ಪದ್ಯವು

**ಕೈಯ ತೋರೋ ಕರುಣೆಗಳರಸನೆ ಕೈಯ ತೋರೋ**
**ಕೈಯಲಿ ತುಂಬ ಬೆಣ್ಣೆ ಕೊಳ್ಳುವ ಕೈಯ..**

ಎಂಬ ಪುರಂದರದಾಸರ ಕೀರ್ತನೆಯನ್ನು ಹೋಲುತ್ತದೆ.

ಪುರಂದರದಾಸರಿಗಿಂತಲೂ ಪೂರ್ವದ ಶ್ರೀಪಾದರಾಜರ ಕೆಲವು ಕೀರ್ತನೆಗಳ ಪ್ರಭಾವವೂ ಪಾರ್ತಿಸುಬ್ಬನ ರಚನೆಗಳ ಮೇಲಾಗಿರುವುದನ್ನು ಪು. ಶ್ರೀನಿವಾಸ ಭಟ್ಟರು ಗುರುತಿಸಿದ್ದಾರೆ.

| | | |
|---|---|---|
| ಶ್ರೀಪಾದ ದಾಸರ ಕೀರ್ತನೆ | : | ಮೀಸಲು ಬೆಣ್ಣೆಯನು ಮೆಲುವುದು ಎನಗೆ ದೋಷವಲ್ಲವೇನಮ್ಮಯ್ಯ |
| ಪಾರ್ತಿಸುಬ್ಬನ ಪದ್ಯ | : | ಮೀಸಲು ಮೊಸರುಂಡರೆ ಮಾನವರ್ಗದು ದೋಷಾವ ಗುಣವಲ್ಲವೇ? |
| ಶ್ರೀಪಾದರಾಯರ ಕೀರ್ತನೆ | : | ಹರವಿ ಹಾಲು ಕುಡಿಯಲು ಎನ್ನ ಹೊಟ್ಟೆ ಕೆರೆಯೇನೆ ಹೇಳಮ್ಮಯ್ಯ |
| ಪಾರ್ತಿಸುಬ್ಬನ ಪದ್ಯ | : | ಕದ್ದು ಮೆಲ್ಲಲೇನು ಕೆರೆಯೆ ಎನ್ನ ಹೊಟ್ಟೆ ಏಕೆ ಜರೆಯುವೆಯವರ ಬರಿಯ ನುಡಿಗೆ |

ಪಾರ್ತಿಸುಬ್ಬನಿಗೆ ಕನ್ನಡ ಸಾಹಿತ್ಯ ಪರಂಪರೆಯ ಓದು ಚೆನ್ನಾಗಿ ಇತ್ತೆಂದೂ, ಆತನ ಪ್ರಸಂಗಗಳ ಮೇಲೆ ದಾಸ ಸಾಹಿತ್ಯದ ಪ್ರಭಾವವೂ ಇತ್ತೆಂದು ಇದರಿಂದ ತಿಳಿಯಬಹುದಾಗಿದೆ. ಕಥೆ, ಆಶಯ ಮತ್ತು ಅಭಿವ್ಯಕ್ತಿಯಲ್ಲಿ ಯಕ್ಷಗಾನಕ್ಕೆ ದಾಸ ಸಾಹಿತ್ಯದ ಪ್ರಭಾವ ದಟ್ಟವಾಗಿರುವುದನ್ನು ಕಾಣಬಹುದು.

ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳನ್ನು ಒಟ್ಟಾಗಿ ಪರಿಶೀಲಿಸಿದರೆ ಒಂದು ಯಕ್ಷ ರಾಮಾಯಣ ಮಹಾಕಾವ್ಯದ ಸ್ವರೂಪವನ್ನು ಕಾಣಬಹುದು. ಒಂದೊಂದು ಪ್ರಸಂಗವನ್ನೂ ಒಂದೊಂದು ಸಂಧಿಯಂತೆ ಗ್ರಹಿಸಬಹುದು. ಮಹಾಕಾವ್ಯವೊಂದರ ವಸ್ತು, ಕಾವ್ಯಗುಣವನ್ನು ಈ ಪ್ರಸಂಗಗಳು ಹೊಂದಿವೆ. ರಸ ವೈವಿಧ್ಯ, ಸೋಪಜ್ಞತೆ, ವಿವಿಧ ಅಲಂಕಾರಗಳ ಸೊಬಗು, ಪ್ರಾಸ, ಛಂದಸ್ಸುಗಳ ಬಳಕೆ, ವಿಶಿಷ್ಟ ಕಾಣ್ಕೆಗಳ ಮೂಲಕ ಈತನ ಪ್ರಸಂಗಗಳು ಕಾವ್ಯಾತ್ಮಕವಾಗಿವೆ. ಸಾಹಿತ್ಯಾಧ್ಯಯನದ ಸಂದರ್ಭದಲ್ಲಿ ಯಕ್ಷಗಾನವನ್ನು ಕೇವಲ ರಂಗ ಪಠ್ಯಗಳೆಂದು ಗ್ರಹಿಸಿ ಅದರ ಸಾಹಿತ್ಯಕ ಮೌಲ್ಯಗಳ ಕಡೆಗೆ ನಿರ್ಲಕ್ಷ್ಯ ತಾಳಲಾಗಿದೆ. ಪಾರ್ತಿಸುಬ್ಬನ ಪ್ರಸಂಗಗಳ ಸಾಹಿತ್ಯಕ ಮೌಲ್ಯ ಉತ್ಕೃಷ್ಟವಾಗಿದ್ದು ಓದುಗಬ್ಬವಾಗಿಯೂ ಈ ಪ್ರಸಂಗಗಳು ಸಲ್ಲುತ್ತವೆ. ಪಾರ್ತಿಸುಬ್ಬನು ಮುಖ್ಯವಾಗಿ ರಾಮಾಯಣದಿಂದಲೇ ತನ್ನ ಕಥಾವಸ್ತುಗಳನ್ನು ಎತ್ತಿಕೊಂಡು ಅಲ್ಲಿ ಶೃಂಗಾರ, ವೀರ, ಹಾಸ್ಯ, ಕರುಣಾರಸಗಳನ್ನು ಮುಖ್ಯವಾಗಿ ತಂದು ಯಕ್ಷಗಾನಕ್ಕೆ ಒಪ್ಪುವ ಸಾಹಿತ್ಯವನ್ನು ರೂಪಿಸಿದ್ದಾನೆ. 'ಪುತ್ರಕಾಮೇಷ್ಟಿ'ಯಿಂದ ತೊಡಗಿ 'ಕುಶಲವರ ಕಾಳಗ'ದ ವರೆಗೆ ರಾಮಾಯಣದ ಸಮೃದ್ಧವಾದ ರಸಭಾಗಗಳು ಪಾರ್ತಿಸುಬ್ಬನ ರಾಮಾಯಣ ಹಾಡುಗಬ್ಬದಲ್ಲಿ ಮಡುಗಟ್ಟಿ ನಿಂತಿವೆ.

ಸಂಪೂರ್ಣ ರಾಮಾಯಣ ಕಾವ್ಯವನ್ನು ಸೃಜಿಸುವ ಉದ್ದೇಶ ಪಾರ್ತಿಸುಬ್ಬನಿಗಿತ್ತೆಂಬುದು ವಿದಿತ. ನಾಂದಿ ಪದ್ಯದಲ್ಲಿ ಅವನೇ ಇದನ್ನು ಹೇಳಿಕೊಂಡಿದ್ದಾನೆ. '...ಪಾರ್ವತೀ ನಂದನಂ ಬತ್ತೀಸಂಕೆಯ ರಾಗತಾಳಗಳೊಳೀ ರಾಮಾಯಣಂ ಪಾಡಿದಂ' ಈ ಹೇಳಿಕೆ ರಾಮಾಯಣವನ್ನು ಬರೆಯುವ ಉದ್ದೇಶ ಸುಬ್ಬನಿಗಿತ್ತು ಎಂಬುದನ್ನೂ, ಪಾಡಿದಂ ಎಂಬುದು ಇದೊಂದು ಹಾಡುಗಬ್ಬದ ಸ್ವರೂಪವುಳ್ಳ ಕಾವ್ಯವೆಂದೂ ಸೂಚಿಸುತ್ತದೆ.

# ಪರಾಮರ್ಶನ


- ಕೃಷ್ಣ ಭಟ್ಟ ಕುಕ್ಕಿಲ (ಸಂ), ಪಾರ್ತಿಸುಬ್ಬನ ಯಕ್ಷಗಾನಗಳು, ಡಾ.ಕೀಲಾರು ಗೋಪಾಲಕೃಷ್ಣಯ್ಯ ಪ್ರತಿಷ್ಠಾನ, ಸಂಪಾಜೆ. ದ್ವಿತೀಯ ಮುದ್ರಣ: ೨೦೦೯

- ಕೃಷ್ಣ ಭಟ್ಟ ಕುಕ್ಕಿಲ, ೧೯೬೧, ಕುಂಬಳೆ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ, ಸಾಹಿತ್ಯ ಸಂಘ, ಕೋಟೆಕಾರು, ದ. ಕ.

- ದೇವುಡು ನರಸಿಂಹಶಾಸ್ತ್ರಿ (ಸಂ.), ಲಕ್ಷ್ಮೀಶನ ಜೈಮಿನಿ ಭಾರತ, ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ, ಬೆಳಗಾವಿ. ೨೦೧೧

- ಪ್ರಭಾಕರ ಜೋಷಿ. ಎಂ, (ಸಂ) ಕುಕ್ಕಿಲ ಸಂಪುಟ, ಕರ್ನಾಟಕ ಸಂಘ, ಪುತ್ತೂರು– ೫೭೪೨೦೨, ೧೯೯೮

- ಮುಳಿಯ ಮಹಾಬಲ ಭಟ್ಟ (ಸಂ) ಸಂಭಾವನಾ ಗ್ರಂಥ, ಯಕ್ಷಗಾನ ಮಕರಂದ, ಪೊಳಲಿ ಶಂಕರನಾರಾಯಣ ಶಾಸ್ತ್ರಿ ಸ್ಮಾರಕ ಸಮಿತಿ, ಮಂಗಳೂರು, ೧೯೮೦

- ಶಿವರಾಮ ಕಾರಂತ ಕೆ. ಯಕ್ಷಗಾನ ಬಯಲಾಟ, ಹರ್ಷ ಪ್ರಕಟನಾಲಯ, ಪುತ್ತೂರು, ದ.ಕ, ೧೯೬೨

- ಶ್ರೀನಿವಾಸ ಭಟ್ ಪು., ೧೯೭೩, ಯಕ್ಷಗಾನ ಕಲಾವಿದರು, ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ, ದ. ಕ.

- ಸಣ್ಣಯ್ಯ ಬಿ.ಎಸ್. (ಸಂ.), ತೊರವೆ ರಾಮಾಯಣ, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ೧೯೫೯


* * *

# ‘ಪಾರ್ತಿಸುಬ್ಬನ ಪ್ರಸಂಗ ಸಾಹಿತ್ಯದಲ್ಲಿ : ಭಕ್ತಿ ಜ್ಞಾನ ಸಂಗೀತ

## (ಅಧ್ಯಕ್ಷರ ಭಾಷಣ)

**– ಡಾ. ಕೆ.ಎಂ.ರಾಘವ ನಂಬಿಯಾರ್**

‘ಅಭಿನವ ಅಭಿನವಗುಪ್ತ’ ಅಂತ ಹೇಳಬಹುದಾದ (ಅವರು ಅಭಿನವಗುಪ್ತರ ‘ಲೋಚನ’ ಸಹಿತ ‘ಧ್ವನ್ಯಾಲೋಕವನ್ನು ಕನ್ನಡಕ್ಕೆ ತಂದಿದ್ದಾರೆ) ಕರ್ನಾಟಕ ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾದ ಪ್ರೊ. ಎಂ.ಎ.ಹೆಗಡೆ ಅವರು ಉದಾರವಾಗಿ ಈ ಸಭೆಗೆ ನನ್ನನ್ನು ಆಹ್ವಾನಿಸಿ, ಹೆಚ್ಚು ಕಷ್ಟಪಡಬೇಕಿಲ್ಲದ ಒಂದು ಸ್ಥಾನವಾದ, ಅಧ್ಯಕ್ಷಪೀಠದಲ್ಲಿ ಕುಳ್ಳಿರಿಸಿರುವುದಕ್ಕೆ ಅವರಿಗೆ ಮೊದಲಾಗಿ ಕೃತಜ್ಞತೆ ಅರ್ಪಿಸುತ್ತೇನೆ.

ಕಾಸರಗೋಡಿನ ಕಾಲೇಜಿನಲ್ಲಿ (ಮುಖ್ಯವಾಗಿ ಯುನಿವರ್ಸಿಟಿ ಕೇಂದ್ರ ಇದು) ನಡೆಯುವ ಈ ಕಾರ್ಯಕ್ರಮಕ್ಕೆ ಕರೆಸಿರುವುದಕ್ಕೆ ನನಗೆ ಆಶ್ಚರ್ಯವಾಗಿದೆ. ನನ್ನ ಹೆಸರಿನಲ್ಲಿ ಅಂಥ ಮಹಾತ್ಮ್ಯವಿದೆ. ಗಡಿನಾಡಿನವರೆಗೆ ಒಂದು ಪ್ರತ್ಯೇಕ ಮನೋಮೇಖಲೆ ಇದೆ. ಅದು ಒಳನಾಡಿನವರೆಗೆ ಅರ್ಥವಾಗುವುದಿಲ್ಲ. ಒಳನಾಡಿನವರಿಗೆ ಗಡಿನಾಡಿನ ಬಗೆ ವಿಚಿತ್ರವಾಗಿ ಕಾಣಿಸುತ್ತದೆ. ಇಂಥ ಒಂದು ಪರಿಸ್ಥಿತಿ ಇಲ್ಲಿಗೆ ಮಾತ್ರ ಸೀಮಿತವಲ್ಲ. ಮಹಾರಾಷ್ಟ್ರದ ಕಡೆಗೆ ಹೋದರೆ ಅಲ್ಲೂ ಇಂಥದು ಕಾಣಸಿಗುತ್ತದೆ. ಎಲ್ಲ ಗಡಿಗಳಲ್ಲೂ ಕತೆ ಇದೇ. ಅದಕ್ಕೆ ಏನು ಕಾರಣ ಎಂದರೆ – ಬದುಕು, ಬದುಕನ್ನು ಹೇಗೆ ನಾವು ನೋಡಬೇಕು ಎಂಬುದೆ ಮುಖ್ಯವಾಗಿ ಇಲ್ಲಿರುವ ವಿಷಯ.

ಇಲ್ಲಿ ಕನ್ನಡವಿದೆ. ಇಲ್ಲಿಂದ ತೆಂಕಣ ಭಾಗಕ್ಕೆ ಹೋದರೆ ಅಲ್ಲಿ ಮಲಯಾಳಂ ಭಾಷೆಯಿದೆ. ಮಲಯಾಳಂ ಭಾಷೆಯನ್ನು ಹಿಡಿದು ಹಿಂದಣ ಕಾಲಕ್ಕೆ ಹೋದರೆ ಎಂಟನೆ ಶತಮಾನಕ್ಕೆ ತಲುಪುವಾಗ ಅಲ್ಲಿ ಮಲಯಾಳಂ ಭಾಷೆಯೆ ಇಲ್ಲ. ಎಂಟನೆ ಶತಮಾನದ ಹಿಂದೆ ಅಲ್ಲಿ ಇದ್ದದ್ದು ತಮಿಳು. ಅದಕ್ಕೆ ‘ಮಲನಾಟ್ಟು ತಮಿಳು’ ಎಂದು ಹೆಸರು. ಇದೇ ವೇಳೆ ನೀವು ಎಂಟನೆ ಶತಮಾನಕ್ಕೆ ಹೋದರೆ ಕನ್ನಡ ಎಲ್ಲಿತ್ತು ಎಂಬುದನ್ನೂ ನೋಡಬೇಕಾಗುತ್ತದೆ. ತುಳು ಎಲ್ಲಿತ್ತು ಅಂತ ನೋಡಬೇಕಾಗುತ್ತದೆ.

ತುಳು ಕ್ರಿಸ್ತಪೂರ್ವ ಎರಡನೆ ಶತಮಾನದಲ್ಲಿ ಆಗಿತ್ತು ಅಂತ ಹೇಳುತ್ತಾರೆ. ಆದರೆ ಅದಕ್ಕೆ ತಕ್ಕ ದಾಖಲೆ ಸಿಗುವುದಿಲ್ಲ. ಸಿಗುವ ಹಳೆಯ ದಾಖಲೆ ಎಂದರೆ ತೋಕೂರು ಶಾಸನ. ತೋಕೂರು ಭೂತಸ್ಥಾನದಲ್ಲಿ ಸಿಕ್ಕಿದ ಕಲ್ಲಿನಲ್ಲಿ ಕೊರೆದ ಶಾಸನ ಅದು. ಒಂದು ಬೌದ್ಧಚೈತ್ಯಾಲಯದ ಅವಶಿಷ್ಟವಾಗಿ ತೋರುತ್ತದೆ. ಅದರ ಭಾಷೆ ನೋಡಿದರೆ ಅದು ಕನ್ನಡವೋ ತಮಿಳೋ ಅಂತ ತರ್ಕ ಮಾಡಬೇಕಾಗುತ್ತದೆ. ಆ ರೀತಿ ಅದರ ಭಾಷೆ ಇದೆ. ಅದಕ್ಕಿಂತ ಹಿಂದೆ ತುಳು ಭಾಷೆ ಒಂದು ರೀತಿಯಲ್ಲಿ ರಚನೆಯಾಗಿದೆ ಎನ್ನಬೇಕಾಗುತ್ತದೆ. ಕನ್ನಡ, ತುಳು, ತಮಿಳು ಇವೆಲ್ಲ ಸೇರಿ ಮಲಯಾಳಂ ಭಾಷೆಯ ಪೂರ್ವರೂಪ ಎಂಟನೆ ಶತಮಾನದಲ್ಲಿ ತಯಾರಾಗುತ್ತದೆ. ಹದಿನಾರನೆ ಶತಮಾನಕ್ಕೆ ಬರುವಾಗ ಆಧುನಿಕ ಮಲಯಾಳಂ ಕಾಣಸಿಗುತ್ತದೆ. ನಮಗೆ ಪಾರ್ತಿಸುಬ್ಬನ ಕನ್ನಡ ಕಾಣಸಿಗುವುದು ಕೂಡ ಇದೇ ಕಾಲಘಟ್ಟದಲ್ಲಿ. ಅವನು ತನ್ನ ಕೃತಿಯಲ್ಲಿ ಎಂಟನೆ ಶತಮಾನದಲ್ಲಿ ತಯಾರಾಗುತ್ತದೆ. ಹದಿನಾರನೆ ಶತಮಾನಕ್ಕೆ ಬರುವಾಗ ಆಧುನಿಕ ಮಲಯಾಳಂ ಕಾಣಸಿಗುತ್ತದೆ. ನಮಗೆ ಪಾರ್ತಿಸುಬ್ಬನ ಕನ್ನಡ ಕಾಣಸಿಗುವುದು ಕೂಡ ಇದೇ ಕಾಲಘಟ್ಟದಲ್ಲಿ. ಅವನು ತನ್ನ ಕೃತಿಯಲ್ಲಿ ಕನ್ನಡದ ಬಗೆಗೆ ಬಹಳವಾದ ಅಭಿಮಾನದ ಮಾತುಗಳನ್ನು ಹೇಳುತ್ತಾನೆ. ಇದು ಸಂಶೋಧನೆಗೆ ಸಂಬಂಧಪಟ್ಟ ವಿಷಯ.

ಈ ಭಾಷಣದಲ್ಲಿ ಪಾರ್ತಿಸುಬ್ಬನ ರಚನೆಗಳಲ್ಲಿರುವಂಥ ಸಾಹಿತ್ಯದ ಬೆಲೆಗಳನ್ನು ಸಮೀಕ್ಷೆ ಮಾಡಬೇಕೆಂದಿದೆ. ಇವತ್ತು ಯಕ್ಷಗಾನದಲ್ಲಿ ಬಹಳವಾಗಿ ಕೊರತೆಯನ್ನು ಕಾಣುವುದು, ಇಷ್ಟು ವಿದ್ಯಾಭ್ಯಾಸ ಬಂದು ಕೂಡ, ಸಾಹಿತ್ಯದ ಅಂಶ ಗೌಣ ಆಗಿರುವುದು. ಇವತ್ತು ಆಟದ ಪ್ರದರ್ಶನದಲ್ಲಿ ಬೌದ್ಧಿಕತೆ ಎಂಬುದೆ ಇಲ್ಲ. ಇದೇ ಪಾರ್ತಿಸುಬ್ಬನ ಪ್ರಸಂಗಗಳನ್ನು ಇಟ್ಟುಕೊಂಡು ಕೀರ್ತಿಶೇಷ ಮಲ್ಪೆ ಶಂಕರನಾರಾಯಣ ಸಾಮಗರು, ಶೇಣಿ ಗೋಪಾಲಕೃಷ್ಣ ಭಟ್ಟರು ಮತ್ತು ಅವರ ಹಿಂದೆ ತುಂಬ ಜನರಿದ್ದಾರೆ, ಅವರೆಲ್ಲರ ಹೆಸರು ಹೇಳುವುದಿಲ್ಲ, ಅವರೆಲ್ಲರ ಪಾತಿನಿಧಿಕವಾಗಿ ಈ ಎರಡು ಹೆಸರು ಹೇಳಿರುವುದು, ಬೇಕಾದರೆ ಪೊಲ್ಯ ದೇಜಪ್ಪ ಶೆಟ್ಟರ ಹೆಸರನ್ನು ಈ ಸಾಲಿನಲ್ಲಿ ಹೇಳಬಹುದು. ಆ ಹೆಸರು ಈ ಭಾಗದಲ್ಲಿ ಅಷ್ಟು ಪರಿಚಿತವಲ್ಲ  ಇವರೆಲ್ಲ ಒಂದೊಂದು ಪಾತ್ರ ಪ್ರಪಂಚವನ್ನು ಸೃಷ್ಟಿ ಮಾಡಿರುವುದನ್ನು ನಾವು ಕಾಣುತ್ತೇವೆ. ಪಾರ್ತಿಸುಬ್ಬನ ಕೃತಿಗಳು 'ರಾಮನಾಟ್ಟಂ' ಕೃತಿಗಳಿಗಿಂತ ಯಾಕೆ ಭಿನ್ನವಾಗುತ್ತವೆ ಎಂದರೆ ಸುಬ್ಬನ ಸಾಹಿತ್ಯದ ಮೇಲ್ಮೆಗಾಗಿ.

ಇವತ್ತು ಕೂಡ ಕಥಕಳಿಯಲ್ಲಿ ರಾಮಾಯಣದ ಪ್ರಸಂಗಗಳನ್ನು ಆಡುವುದು ಕೊಟ್ಟಾರಕ್ಕರ ರಾಜನ 'ರಾಮನಾಟ್ಟಂ' ಕೃತಿಗಳನ್ನೇ. ಎಷ್ಟೊ ಬಾರಿ ಟಿವಿಯಲ್ಲಿ ಕಥಕಳಿಯ ರಾಮಾಯಣದ ಕತೆ ಆಡುವಾಗ ನಾನು ಣಜಥಣನ್ನು ಇಟ್ಟುಕೊಂಡು ಹೋಲಿಸಿ ನೋಡಿದ್ದುಂಟು. ಮುದ್ರಿತ ರಾಮನಾಟ್ಟಂ ಆಟ್ಟಕ್ಕಥೆಯನ್ನೇ ಅವರು ಹಾಡುವುದು ಶ್ರುತುಪಟ್ಟಿದೆ. ರಾಮನಾಟ್ಟಂ ಕೃತಿಗಳಿಗೂ ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗಗಳಿಗೂ

ಇರುವ ಹೊಡೆದುಕಾಣಿಸುವ ವ್ಯತ್ಯಾಸವೆಂದರೆ ಪಾರ್ತಿಸುಬ್ಬ ತನ್ನ ಕೃತಿಗಳಲ್ಲಿ ಸಾಹಿತ್ಯಕ್ಕೆ ಕೊಟ್ಟಿರುವ ವಿಶೇಷವಾದ ಪ್ರಾಧಾನ್ಯ.

ಗೋಷ್ಠಿಯಲ್ಲಿ ಭಕ್ತಿಯ ಮಾತು ಬಂತು. ಬಲು ಮುಖ್ಯವಾದ ವಿಷಯವದು. ಪಾರ್ತಿಸುಬ್ಬನ ಭಕ್ತಿಯ ನೆಲೆಯನ್ನೂ ನಾವು ಪರೀಕ್ಷಿಸಬೇಕಾಗುತ್ತದೆ. ಆತ 'ಕೃಷ್ಣಚರಿತೆ'ಯನ್ನು ಬರೆಯುವಾಗ 'ತಾನು ಶಿವ ಕೊಟ್ಟಬುದ್ಧಿಯ ಹಾಗೆ ಬರೆಯುತ್ತೇನೆ' ಎಂದು ಹೇಳುತ್ತಾನೆ. ನೋಡಿ–

**'ಪರಮವೈಷ್ಣವ ಶುಕಾಚಾರ್ಯ ಮುನಿವದನ ಸರ**
**ಸಿರುಹದಿಂದೊಗೆದ ಶ್ರೀಕೃಷ್ಣ ಚರಿತವನು ನಾ**
**ವಿರಚಿಸುವೆ ಕನ್ನಡದ ಯಕ್ಷಗಾನದಲಿ ಶಿವ ಕರುಣಿಸಿದ ಬುದ್ಧಿಯಿಂದ' (ಕೃಷ್ಣಚರಿತೆ)**

ಆಚಾರ್ಯ ಶಂಕರ ಮುಂತಾದ 'ಶಿವಸ್ಯ ಹೃದಯಂ ವಿಷ್ಣುಃ, ವಿಷ್ಣೋಃ ಹೃದಯಂ ಶಿವಃ' ಎಂಬುದನ್ನು ಒಪ್ಪಿದ ಸಮಾಜವಿದು. ಸುಬ್ಬ ಕೂಡ ಶಂಕರಾಚಾರ್ಯರ ಅನುಯಾಯಿ. 'ಕುಶಲವರ ಕಾಳಗ'ದ ಆರಂಭದಲ್ಲಿ ಬರುವ ದ್ವಿಪದಿಗಳಲ್ಲೊಂದರಲ್ಲಿ 'ಶಂಕರಚಾರ್ಯರಿಗೆ ಶರಣೆಂಬೆ ಬಳಿಕ । ನಾ ಕಂಡ (?) ಗುರುವೆನಗೆ ದಯಮಾಡುವತನಕ' ಎನ್ನುತ್ತಾನೆ.

ಭಕ್ತಿ ಎಂದೊಡನೆ ನಿರ್ದಿಷ್ಟ ದೇವರಿಗೆ ಕಟ್ಟುಬಿದ್ದ ಹಾಗೆ ಅನೇಕರು ಭಾವಿಸುವುದುಂಟು. ಸಾಧಕನು ಕೃಷ್ಣಭಕ್ತನಾಗಿರುತ್ತಲೆ ಶಿವನ ಭಕ್ತನೂ ಹೌದು. ಭೂತವನ್ನು ನಂಬುವಾತ ಭೂತದ ಹೆಸರು, ಚರಿತ್ರೆ, ಆಕೃತಿ ಹೇಗಿದ್ದರೂ, ಅದು ಗಂಡಾದರೂ, ಹೆಣ್ಣಾದರೂ ಅಂತಿಮವಾಗಿ ಅದನ್ನು ತಾನು ನಂಬಿದ 'ಸತ್ಯ' ಎನ್ನುತ್ತಾನೆ. ಅಲ್ಲಿ ರೂಪ ಮುಖ್ಯ ಅಲ್ಲ. ಅಂದರೆ ಎಲ್ಲ ದೇವರೂ ಅಂತಿಮವಾಗಿ ಈ ಜಗವನ್ನು ಆಳುತ್ತಿರುವ ಒಂದು ಶಕ್ತಿ ಎಂಬುದೇ ಭಕ್ತಿಮಾರ್ಗದ ಅಂತರಾರ್ಥ. ಷಣ್ಮತ ಆರಾಧನೆಯ ತಿರುಳು ಕೂಡ ಇದೇ ಆಗಿದೆ. ಬಾಹ್ಯ ಆಚರಣೆಗಳನ್ನು ಮಾತ್ರ ಕಾಣುವ ವಿದೇಶೀ ಮತಗಳ ಅನುಯಾಯಿಗಳಿಗೆ ಇದು ಅರ್ಥವಾಗುವುದಿಲ್ಲ.

ಭಕ್ತಿಯ ಸ್ವರೂದ ಬಗೆಗೂ ಪಾರ್ತಿಸುಬ್ಬ ತನ್ನ ಪರಿಕಲ್ಪನೆಗೆ ಸ್ಪಷ್ಟರೂಪ ಕೊಟ್ಟದ್ದಿದೆ. ಆತ ಹೇಳುತ್ತಾನೆ

**'ಹೃದಯಕಮಲವೆಂಬ ಹರಿವಾಣದೊಳು ದಿವ್ಯ**
**ಸದಮಲ ಭಕ್ತಿರಸದ ತೈಲದಿ,**
**ಪದುಮನಾಭನ ನಾಮವೆಂಬ ಜ್ಯೋತಿಯ ತಂದು,**
**ಮುದದಿಂದ ಜ್ಞಾನದಾರತಿಯೆತ್ತರೆ.'**

ಭಕ್ತಿಯೆನ್ನುವುದು ಜ್ಞಾನಪರ್ಯವಸಾಯಿಯಾಗಬೇಕು. ಅಂದರೆ ಭಕ್ತಿಯು ಒಬ್ಬನನ್ನು ಜ್ಞಾನಕ್ಕೆ ತಲುಪಿಸಬೇಕು ಎಂಬುದು ಸುಬ್ಬನ ಮನೋಗತ ಎಂದು ತಿಳಿಯಬಹುದು. ಜ್ಞಾನದಿಂದಲೆ ಮೋಕ್ಷ. ಇದನ್ನು ಎಲ್ಲ ಆಚಾರ್ಯರು ಒಪ್ಪಿದ್ದಾರೆ. ಇಂಥದರಿಂದಲೆ ಅವನ ರಚನೆಗಳಲ್ಲಿ ಹೆಚ್ಚು ಸಾಹಿತ್ಯದ ಶಕ್ತಿ ತುಂಬಿದೆ ಎಂದು ನಾನು ಹೇಳಿರುವುದು.

ಸಮಾಜದಲ್ಲಿ ಭಕ್ತಿಗೆ ಪ್ರಾಧಾನ್ಯ ಬಂದುದಕ್ಕೆ ಚಾರಿತ್ರಿಕ ಕಾರಣಗಳೂ ಇವೆ. ಮೌರ್ಯರ ಕಾಲದಿಂದ ತೊಡಗಿ ಈ ದೇಶದಲ್ಲಿ ರಾಜಸತ್ತೆ ಕೊನೆಗೊಳ್ಳುವವರೆಗೂ ಬಹುತೇಕ ಒಬ್ಬನನ್ನು ಕೊಂದೇ ಮುಂದಿನವ ರಾಜನಾಗಿ ಅಧಿಕಾರಕ್ಕೆ ಬಂದುದನ್ನು ಕಾಣುತ್ತೇವೆ. ರಾಜಕೀಯ ಎಂದರೆ ಶತ್ರುವಿನ ಹತ್ಯೆ, ಬಂಧುಜನ ಹತ್ಯೆ, ಅದರ ಬಗೆಗೆ ಭಯ. ಪರಸ್ಪರ ಅಪನಂಬಿಕೆ. ಆಡಳಿತ ಜನರಲ್ಲಿ ಈ ಬಗೆಯ ಅಸ್ಥಿರತೆ ಎಂದರೆ ಸಮಾಜ ಯಾರ ಮೇಲೆ ಭರವಸೆ ಇಡಬೇಕು? ಯಾವಾಗ ನೋಡಿದರೂ ಗಡಿ ತಂಟೆ, ಒಕ್ಕಲಿನ ಮೇಲೆ ಧನಿಯ ಆಳುಗಳ ಬಲಪ್ರಯೋಗ. ಬದುಕಿನಲ್ಲಿ ಸಂತೋಷ ಇಲ್ಲ. ಇಲ್ಲಿ ಪಾರ್ತಿಸುಬ್ಬನ ಉದ್ದೇಶ ಸ್ಪಷ್ಟವಾಗುತ್ತದೆ. ಆತ ಹೇಳುತ್ತಾನೆ–

**ಅರಿತು ಹೇಳುವ, ಕೇಳ್ವ ಪುಣ್ಯವಂತರಿಗೆ ಬಹ**
**ದುರಿತಗಳ ಪರಿಹರಿಸಿ ಸಂತೋಷದಲಿ ಕಣ್ವ**

ಪುರದೊಡೆಯ ಮುದದಿಂದ ಸಕಲ ಭಾಗ್ಯವನ್ನಿತ್ತು ಪೊರೆವನನುಗಾಲ ಬಿಡದೆ. (ಉಂಗುರಸಂಧಿ) ಎಂಬುದು ಕೂಡ ಮುಖ್ಯವಾದ ಮಾತು. 'ಸೀತಾಕಲ್ಯಾಣ'ದಲ್ಲಿ – 'ಕಂತುಜನಕನ ಚರಿತೆ ಇದನು ಕೇಳ್ದವರಿಗೆ, ಅತ್ಯಂತ ಸೌಖ್ಯವನಿತ್ತು ಧರೆಯೊಳನವರತ ನಿಶ್ಚಿಂತೆಯಲಿ ಸಲಹುವನು ಕಣ್ವಪುರದೊಡೆಯ ಶ್ರೀಕೃಷ್ಣಂ  ಕಟಾಕ್ಷದಿಂದ) (ಸೀತಾಕಲ್ಯಾಣ).

ಆ ಕಾಲಘಟ್ಟದಲ್ಲಿ ರಂಗಭೂಮಿಯು ಜನಪದಗಳ ಭಯವನ್ನು ತೊಲಗಿಸಿ, ನಿಶ್ಚಿಂತೆಯನ್ನು ಹೊಂದಲು, ಸಂತೋಷಪಡಲು ಅವಕಾಶ ಮಾಡಿಕೊಟ್ಟಿತೆನ್ನುವುದರಲ್ಲಿ ಸಂಶಯವಿಲ್ಲ. ದೇವಸ್ಥಾನ ಆಟದ ಮೇಳ ಮಾಡಲು ಕಾರಣವಾದ ಸಾಮಾಜಿಕ ಹಿನ್ನೆಲೆ ಕೂಡ ಇದೇ ಎಂದು ಹೊಡೆದು ಕಾಣಿಸುತ್ತದೆ. ಭಯದ ವಾತಾವರಣದಲ್ಲಿ ದಾಂಪತ್ಯವಾದರೂ ಸುಗಮವಾಗುವುದಿದೆಯೇ? ವಿಚಾರಿಸಿ ನೋಡಬೇಕು. ಬಹುಶಃ ಸಭಾಲಕ್ಷಣದಲ್ಲಿ, ದೇವರ ಸಂಬಂಧವಾಗಿಯಾದರೂ, ಇತರರು ಅಶ್ಲೀಲ ಎನ್ನಬಹುದಾದಷ್ಟು, ಕಾಮಾಸಕ್ತಿಯ ಮಾತುಗಳು ನೇರವಾಗಿಯೂ, ಧ್ವನಿತವಾಗಿಯೂ ಕಾಣಸಿಗುತ್ತವೆ. ಸಾಮಾಜಿಕ ಇತಿಹಾಸವನ್ನು ಅಧ್ಯಯಿಸದಿದ್ದರೆ ಇದು ಏನೆಂದು ಅರ್ಥವಾಗುವುದಿಲ್ಲ.

'ಸಂತೋಷ'ವನ್ನು ಆನಂದ ಎಂಬ ಅರ್ಥದಲ್ಲಿ ಸುಬ್ಬ ಪ್ರಯೋಗಿಸಿದಂತಿದೆ. ಒಳ್ಳೆಯ ಹಸಿವಾದರೆ ಉತ್ತಮ ಊಟ ಸಿಕ್ಕಿದಾಗ ಸಂತೋಷವಾಗುತ್ತದಾದರೂ ಅದು ಆನಂದವಲ್ಲ. ಕೆರೆಮನೆ ಶಂಭು ಹೆಗಡೆ ಒಂದು ಕಡೆ ಹೇಳಿದರು  ಕಲಾವಿದರನ್ನು ಯಾಕೆ ಸಂಮಾನಿಸಬೇಕೆಂದರೆ ಸಮಾಜಕ್ಕೆ ಆನಂದ ಸಿಗುವುದು ಅವರಿಂದ ಮಾತ್ರ, ಅಂತ. ಆನಂದ ಎಂಬುದು ತಾತ್ಕಾಲಿಕ ಸುಖವಲ್ಲ ಬದಲು ಬದುಕಿನ ಆತ್ಯಂತಿಕವಾದ ಹರುಷ ಅಥವಾ ಅನುಭಾವ ಎಂದು ಹೇಗೆ ಬೇಕಾದರೂ ಹೇಳಿಕೊಳ್ಳುವ, ಅಲ್ಲಿಗೆ ತಲುಪಿಸುವ ಯೋಗ್ಯತೆ ಇರುವುದು ಕಲಾರೂಪಕ್ಕೆ ಮಾತ್ರ. ಕಲಾರೂಪ ಎಂಬುದು ಯಾವುದಕ್ಕೂ ಅಠಟಟುಣಣಜಜ ಅಲ್ಲ. ನೀವು ಮಹಾಭಾರತವನ್ನೇ ತೆಗೆದುಕೊಳ್ಳಿ. ವ್ಯಾಸರು ಯಾವುದಕ್ಕೂ ಅಠಟಟುಣಣಜಜ ಅಲ್ಲ. ಕೃಷ್ಣನಿಗೂ ಅಲ್ಲ. ದುರ್ಯೋಧನ ದುಷ್ಟನಾದರೂ ಅವನಲ್ಲಿ ಇರುವ ಒಳ್ಳೆತನವನ್ನು ಕೂಡ ಹೇಳುತ್ತಾನೆ.

ಹೀಗೆ ಮನುಜರ ನಡವಳಿಕೆಗಳನ್ನು ಸಾಕಲ್ಯವಾಗಿ ನೋಡುವ ದೃಷ್ಟಿ ಮಹಾಭಾರತ, ರಾಮಾಯಣಗಳಲ್ಲಿದೆ. ಅವುಗಳಿಂದ ಅಲ್ಲವೆ ನಮ್ಮ ಎಲ್ಲ ಕಲೆಗಳ, ರಂಗ ಚಟುವಟಿಕೆಗಳ ಉಗಮ. ಅವು ಸೂರ್ಯನ ಹಾಗೆ. ನಮಗೆ ಎಲ್ಲ ಬೆಳಕು, ಶಕ್ತಿಗಳೂ ಸಿಗುವುದು ಅಲ್ಲಿಂದಲೇ. ಒಟ್ಟಿನಲ್ಲಿ ಭಕ್ತಿ ಮನುಜರಿಗೆ ಅಭಯ ಮತ್ತು ಆನಂದದ ಮೂಲ ಎಂದ ಹಾಗಾಯಿತು.

ರಂಗಭೂಮಿ ಎನ್ನುವುದರೊಂದಿಗೆ ಪಾರ್ತಿಸುಬ್ಬನ ಕೃತಿಗಳ ಬಗೆಗೂ ವಿದ್ವಾಂಸರಲ್ಲಿ ಬುದ್ಧಿಭೇದ ಕಾಣಿಸಿರುವುದಿದೆ. ಆಗಲೆ ಪ್ರಬಂಧದಲ್ಲಿ ಒಂದು ಪದವನ್ನು ಉದಾಹರಿಸಿದರು. ಅದು ಹೀಗೆ–

**ಬತ್ತೀಸಾಕೃತಿ ತಾಳರಾಗವಿಧದಿಂ ರಾಮಾಯಣಂ ಪೇಳ್ವುದಾ**
**ಭಕ್ತಿಧ್ಯಾನದಿ ಕೇಳ್ದು ಪುಣ್ಯಕಥೆಯಂ ಸಂತೋಷಮಂ ಮಾಳ್ಪುದು ॥ (ಪಟ್ಟಾಭಿಷೇಕ)**

ಇಲ್ಲಿರುವ 'ಪೇಳ್ವುದಾ', 'ಕೇಳ್ದು' ಎಂಬ ಪ್ರಯೋಗಗಳನ್ನು ಆಧರಿಸಿ ವಿದ್ವಾಂಸರು, "ಯಕ್ಷಗಾನ ಪ್ರಸಂಗಗಳು ಮೊದಲು 'ಓದು ಕಾವ್ಯ'ವಾಗಿ ರಚನೆಗೊಂಡವು, ಅನಂತರ ರಂಗಭೂಮಿಯಾಗಿ ವಿಕಸಿತವಾಯಿತು' ಅಂತ ಒಂದು ತಿಯರಿ ಕಟ್ಟಿ ಹೇಳತೊಡಗಿದರು. ಬಹಳ ತಪ್ಪಾದ ಗ್ರಹಿಕೆಯಿದು. ಕಾಳಿದಾಸನ 'ವಿಕ್ರಮೋರ್ವಶೀಯಂ' ನಾಟಕ ಪ್ರಸಿದ್ಧವಿದೆ. ಅದರಲ್ಲಿ ಸೂತ್ರಧಾರ ಹೇಳುವ ಮಾತನ್ನು ಗಮನಿಸಬೇಕು–

**ಪ್ರಣಯಿಷು ವಾ ದಾಕ್ಷಿಣ್ಯಾದಥವಾ ಸದ್ವುಸ್ತು ಪುರುಷಬಹಮಾನಾತ್ ।**
**ಶೃಣುತ ಮನೋಭಿರವಹಿತೈಃ ಕ್ರಿಯಾಮಿಮಾಂ ಕಾಳಿದಾಸಸ್ಯ ॥ (ವಿಕ್ರಮೋರ್ವಶೀಯಂ)**

ಕಾಳಿದಾಸನ ಕ್ರಿಯಾ ಎಂದರೆ ಕೃತಿ (ನಾಟಕ)ಯನ್ನು ಶೃಣುತ ಎಂದರೆ ಆಲಿಸಿರಿ ಎಂದು ನಾಟಕ ನೋಡಲು ಕುಳಿತವರಲ್ಲಿ ಸೂತ್ರಧಾರ ಹೇಳುತ್ತಾನೆ. ಇದನ್ನು ನೋಡಿ ಕಾಳಿದಾಸನ ನಾಟಕವೂ ಮೊದಲು ಓದುಕಾವ್ಯ ಆಗಿದ್ದಿತು ಎನ್ನಬೇಕಲ್ಲ? ನಾಟಕ ದೃಶ್ಯಕಾವ್ಯವಾದರೂ ದೃಶ್ಯದಲ್ಲಿ ಬರುವ ಗೇಯ ಮತ್ತು ಸಂಭಾಷಣಾತ್ಮಕ ಸಾಹಿತ್ಯವನ್ನು ಗಮನಿಸುವುದು ಅವಶ್ಯ, ಸರಿಯಾಗಿ ಆಲಿಸಿರಿ ಎಂದು ಸೂತ್ರಧಾರನ ಮಾತಿನ ತಾತ್ಪರ್ಯ. ನಾಟಕದಲ್ಲಿ ಬರುವ ಮಾತಿನ ಅಂಶಕ್ಕೆ ಭಾರತಿ ವೃತ್ತಿ ಎಂದು ಹೆಸರು. ರಂಗದಲ್ಲಿ ಭಾರತೀ ವೃತ್ತಿ ಬಹಳ ಮುಖ್ಯವಾದುದು ಎನ್ನುತ್ತದೆ ನಾಟ್ಯಶಾಸ್ತ್ರ. ಅದರಿಂದ ಹೇಳುವೆ, ಕೇಳಿರಿ ಎಂದು ರಂಗಭೂಮಿಯಲ್ಲಿ ಬಳಕೆಯಾಗುವುದಕ್ಕೆ ಕಾಳಿದಾಸನ ಕಾಲದಷ್ಟು ಹಳೆಯ ಪರಂಪರೆ ಇದೆ ಎಂದು ಅರ್ಥಮಾಡಬೇಕು.

ವಿಕ್ರಮೋರ್ವಶೀಯಂ ನಾಟಕ ನೋಡಿದರೆ ಅದು ಕೇವಲ ಪಠ್ಯವಾಗಿ ಕಾಣಿಸುತ್ತದಷ್ಟೆ? ಅದನ್ನು ಹೇಗೆ ಆಡಿದರು? ನಮ್ಮ ಯಕ್ಷಗಾನ ಆಟ ಆಡುವಂತೆಯೇ. ವೇಷಭೂಷಣ, ಹಾಡು, ವಾದನ, ಕುಣಿತ, ಸಂಭಾಷಣೆ ಎಲ್ಲವನ್ನೂ ಸೇರಿಸಿಯೇ ರಂಗಪ್ರಯೋಗ ಆಗುತ್ತಿದ್ದದು. ಚತುರ್ವಿಧಾಭಿನಯಗಳಲ್ಲಿ ಭಾರತೀವೃತ್ತಿಗೆ ಪ್ರಾಧಾನ್ಯ ನೀಡಲಾಗಿದೆ. ಆದ್ದರಿದಲೇ ಯಕ್ಷಗಾನ ಭಾಗವತರೂ ಪೇಳುವೆನೀ ಕಥಾಮೃತವ ಎನ್ನುತ್ತ ಪ್ರಸಂಗವನ್ನು ತೊಡಗುವುದು.

**'ಅಂಗದಸಂಧಾನ'ದಲ್ಲಿ ಕೊನೆಯ ಪದ್ಯ ಹೀಗಿದೆ–**
**ರಾಮಚರಿತವನು ಕನ್ನಡ ಯಕ್ಷಗಾನದಲಿ**
**ನಾ ಮನಸು ಬಂದಂತೆ ವರ್ಣಿಸಿದೆನಿದರ ನಿ**
**ಸ್ಸೀಮ ಕವಿಗಳು ಕೇಳಿ ತಪ್ಪುಗಳ ಕಳೆದು ಶುದ್ಧಪ್ರತಿಯ ಮಾಡಿ ಬಳಿಕ**
**ಭೂಮಿಯೊಳು ರಾಗತಾಳವನರಿತು ಪಾಡಿದರೆ**
**ಆ ಮಹಾಕಣ್ವಪುರದೊಡೆಯ ಶ್ರೀಕೃಷ್ಣ ಸು**
ಪ್ರೇಮದಿಂ ಸಕಲಭಾಗ್ಯವನಿತ್ತು ಸಕಲರಂ ರಕ್ಷಿಸುವನನುದಿನದೊಳು.
(ಅಂಗದಸಂಧಾನ)

ಈ ಪದ್ಯದಲ್ಲಿ ಬಲು ಅಪಾಯಕಾರಿಯಾದ ಹೇಳಿಕೆಯನ್ನು ನೀಡಿಬಿಟ್ಟಿದ್ದಾನೆ ಪಾರ್ತಿಸುಬ್ಬ. ತನ್ನ ಕೃತಿಯನ್ನು ತಿದ್ದುವುದಕ್ಕೆ ಫುಲ್ ಲೈಸೆನ್ಸ್ ಕೊಟ್ಟಿಬಿಟ್ಟಿದ್ದಾನೆ ಅಂತ ಅನಿಸಿದರೂ ಸಾಕಷ್ಟು ಎಚ್ಚರಿಕೆಯನ್ನೂ ವಹಿಸಿದ್ದಾನೆ. ತಿದ್ದುವುದು ಯಾಕೆ? ಅದು ಮೇಳಗಳ ಭಾಗವತರಿಗೆ ಎಂದರೆ ಸಮಸ್ತ ಕಲಾವಿದರಿಗೆ ಕೊಟ್ಟ ನಿರ್ದೇಶನ. ತೆಗೆದ ಪ್ರತಿಯನ್ನು ಆಟದ ಹಾಡು ಆಲಿಸಿದ 'ನಿಸ್ಸೀಮ ಕವಿ'ಗಳಿಗೆ ಅಂದರೆ ಗಟ್ಟಿ ವಿದ್ವಾಂಸರಿಗೆ ತೋರಿಸಿ (ಅಥವಾ ಅವರಿಂದ ಕೇಳಿ) ತಪ್ಪುಗಳ ಕಳೆದು ಶುದ್ಧಪ್ರತಿ ಮಾಡಿ ಬಳಿಕ

ರಂಗದಲ್ಲಿ ಆಡಬೇಕು. ತಿದ್ದುವುದು ಎಷ್ಟು ಜವಾಬುದಾರಿಯ ಕೆಲಸ ಎಂಬುದನ್ನು ಸೂಚಿಸಿದ ಹಾಗಾಯಿತು. ಇನ್ನು ಹೇಗೆ ಹಾಡಬೇಕು? ಭೂಮಿಯೊಳು (ನೆಲದಲ್ಲಿ ನಿಂತು, ನಡೆದು, ಕುಣಿದು) ರಾಗತಾಳವನರಿತು ಪಾಡಬೇಕು. ಯಕ್ಷಗಾನದಲ್ಲಿ ರಾಗ ಇರಲಿಲ್ಲ, ತಾಳ ಇರಲಿಲ್ಲ ಎಂಬ ಎಲ್ಲಾ ಬೇಜವಾಬ್ದಾರಿಯ ಮಾತು ಆಡುವುದನ್ನು ಕೇಳುತ್ತೇವೆ. ಅಂಥವರು ಪಾರ್ತಿಸುಬ್ಬನ ಈ ನಿರ್ದೇಶನ ಕಡೆಗೆ ಗಮನ ಹರಿಸುವುದು ಒಳ್ಳೆಯದು.

ಆಟದವರು ಮಾತ್ರವಲ್ಲ ನಮ್ಮ ಜಾನಪದರು ಕೂಡ ಯಕ್ಷಗಾನದ 'ಪದ ಹೇಳುವುದು' ಎನ್ನುತ್ತಾರೆಯೆ ವಿನಾ ಪದ್ಯ ಹಾಡುವುದು ಎನ್ನುವುದಿಲ್ಲ. ಹಾಗೆ ಹೇಳುವುದು ಗೊತ್ತಿಲ್ಲದವರು. ಪದ ಎಂಬುದು ನಾಟ್ಯಶಾಸ್ತ್ರದ ಪರಿಭಾಷೆ. ಪದ ಎಂದರೆ ರಾಗ, ತಾಳಗಳಿಗೆ ನಿಬದ್ಧವಾದ ಸಾಹಿತ್ಯ ರಚನೆ ಎಂದರ್ಥ.

ಪದ ಹಾಡುವುದಕ್ಕೆ ತಾಳದ ಗತಿ ಅಕ್ಷರ ಅಕ್ಷರಗಳಿಗೂ ನೀಡಿದ ಸ್ವರಗಳ ಸಂಯೋಜನೆಗಳನ್ನು ಲಕ್ಷಿಸಲು ಇದೆ. ಇವತ್ತು ಯಕ್ಷಗಾನದ ಹಾಡುಗಾರರು ಈ ವಿಷಯದಲ್ಲಿ ಅತ್ಯಂತ ಬೇಜವಾಬುದಾರಿಯಿಂದ ವ್ಯವಹರಿಸುತ್ತಿದ್ದಾರೆ. ತಾಳದ ಆವರ್ತನದ ಚೌಕಟ್ಟಿನ ಒಳಗೆ ಇರುವ ಅಕ್ಷರಗಳ ಹ್ರಸ್ವ-ದೀರ್ಘಗಳ ಅಳತೆಗೆ ಅಳವಡಿಸಿದ ಭಾವನಿರ್ಭರ ಸ್ವರಗಳಿಂದ ಹಾಡಬೇಕು. ನಡುನಡುವೆ ಬೇಕೆಂದೇ ಬಿಡುವು ಮಾಡಿಕೊಂಡು ರಾಗವಿಸ್ತಾರ ಮಾಡುವ ಅವಕಾಶ ಇಲ್ಲಿಲ್ಲ. ವಿವಿಧ ಛಂದಸ್ಸುಗಳು ಶಬ್ದಗಳನ್ನು ಕುಣಿಸುವ ಬಗೆ ವಿಶಿಷ್ಟವಾದದ್ದು. (ಮಾತನಾಡಬಾರದೇನೆ ಪದವನ್ನು ಹಾಡಿ ತೋರಿಸಿತು)

ಇನ್ನು ಪಾರ್ತಿಸುಬ್ಬ ಸಂಗಿತಾತ್ಮಕವಾಗಿ ವೈವಿಧ್ಯಪೂರ್ಣವಾದ ಛಂದೋರೂಪಗಳಲ್ಲಿ ಮಾತುಗಳನ್ನು ರಚಿಸಿಕೊಟ್ಟಿರುವ ಬಗೆಗೆ ಗಾಯಕರು ಹರುಷಗೊಳ್ಳುವುದು ಸಹಜ. ಆದರೆ ಸಾಹಿತ್ಯದ ನೆಲೆ ಬೆಲೆ ಏನು? ಇದನ್ನು ಒಂದಷ್ಟು ಒರೆಗೆ ಹಚ್ಚಬೇಕು. ಅವನ ಮಾತುಗಳು ಪಾಂಡಿಯ ಪ್ರದರ್ಶನಕ್ಕೆ ಹೋಗುವಂಥವುಗಳಲ್ಲ. ಮನೆಮಾತಿನ ಹಾಗೆ ಸರಳವಾಗಿ ಕಾಣಿಸುವವುಗಳು. ಆದರೆ ಅವು ತಮ್ಮ ಒಡಲಲ್ಲಿ ಹುದುಗಿಸಿಕೊಂಡ ಅರ್ಥದ ಆಳ ಅಗಲಗಳ ದರ್ಶನವಾದಾಗ ಬೆರಗಾಗುತ್ತೇವೆ. ಪಟ್ಟಾಭಿಷೇಕದ ಕೆಲ ಪದಗಳನ್ನು ನೋಡುವ, ದಶರಥ ಗುರು ವಸಿಷ್ಠ, ಮಂತ್ರ ಸುಮಂತ್ರ ಇವರನ್ನು ಆಪ್ತ ಸಮಾಲೋಚನೆಗೆ ಕರೆಸಿದ ಸಂದರ್ಭ.

**ರಾಗಭೈರವಿ ಝಂಪೆತಾಳ**
**ಮಂತ್ರಿ ಮಹಾವೀರ । ಸುಮಂತ್ರ ಬಹುಧೀರ ।**
**ಅಂತರಂಗದಿ ಪೇಳ್ವೆ । ನೀ ತಿಳಿದು ಪೇಳು ॥೧॥**

**ಪೊಡವಿಯಾಳಿದೆನಿನ್ನು । ಕಡುವೃದ್ಧನಾದೆ ॥೨॥**
**ಪೊಡವಿಯನು ರಾಘವಗೆ । ಕೊಡುವೆ ನಾನದಕೆ ।**
**ಪೋಡವಿಪತಿಗಳ ಕರೆಸು । ಪುರವ ಸಿಂಗರಿಸು ॥೩॥**

ಇಲ್ಲಿ ಶಬ್ದಗಳಲ್ಲಿ ಏನಿದೆ? ಪದಗಳಲ್ಲಿ ಎಂಟೊಂಬತ್ತು ಸಾಮಾನ್ಯ ಶಬ್ದಗಳು. ಆದರೆ ಅದು ಗುಪ್ತ ಸಮಾಲೋಚನೆಯ ಸಭೆ. ಮಂಥರೆ ಗೋಡೆಗೆ ಕಿವಿಗೊಡದಿದ್ದರೆ ಯಾರೂ ಅರಿಯದ ಸಮಾಲೋಚನೆ. ಅಲ್ಲಿ ಪ್ರಸ್ತಾವಿಸುವ ಅಭಿಪ್ರಾಯ ಅಷ್ಟು ಸರಳವಲ್ಲ. ರಾಮನಿಗೆ ಪಟ್ಟಾಭಿಷೇಕ ಮಾಡುವ ವಿಚಾರ. ಅದು ಅಷ್ಟು ಗಹನವಾದ್ದರಿಂದಲೇ ಮಂತ್ರಿಯ ಅಭಿಪ್ರಾಯಕ್ಕೆ ತೂಕ. ಅವನಾದರೂ ವಹಿಸಬೇಕಾದ ಜವಾಬ್ದಾರಿ ಸಣ್ಣದಲ್ಲ. ಅದನ್ನೆಲ್ಲ ದಶರಥ ಮಂತ್ರಿಗೆ ಕೊಡುವ ವಿಶೇಷಣಗಳಿಂದ ಕಂಡುಕೊಳ್ಳುತ್ತೇವೆ. ಮಹವೀರ, ಬಹುಧೀರ ಈ ವಿಶೇಷಣಗಳನ್ನು ಕೇಳುವಾಗಲೆ ಅಳ್ಳೆದೆಯ ಮಂತ್ರಿಯಾದರೆ ನಡುಗಬೇಕು. ನೀ ತಿಳಿದು ಪೇಳು ಎನ್ನುವಲ್ಲಿನ ಹೊಣೆಗಾರಿಕೆ ಎಷ್ಟು ದೊಡ್ಡದು? ಸ್ವಂತಕ್ಕೆ ಒಂದು ಪದವೂ ಇಲ್ಲದ ಸುಮಂತ್ರನ ಪಾತ್ರ ಪಡೆಯುವ ಪ್ರಾಧಾನ್ಯ ಅದು.

ರಾಜ್ಯಾಧಿಕಾರ ಯಾರಿಗೆನ್ನುವುದರ ನಿರ್ಣಯವನ್ನು ಇನ್ನಷ್ಟು ಹಿಂದಕ್ಕೆ ಹಾಕಲು ಇನ್ನು ಸಾಧ್ಯವಿಲ್ಲ. ಯಾಕೆಂದರೆ ತಾನು ಕಡುವೃದ್ಧನಾದೆ ಎಂಬುದು ಸ್ಥಿರಪಟ್ಟಿದೆ. ಒಡಲು ನೆಲೆಯೆಂದು ಬಹುಕಾಲ ತಿಳಿದದ್ದು ಈಗ ಹುಸಿಯೆಂದು ದೃಢಪಟ್ಟಿದೆ. ಆದ್ದರಿಂದಲೆ ಪೊಡವಿಯಧಿಕಾರವನ್ನು ರಾಘವನಿಗೆ ಕೊಡುವ ಅಭಿಪ್ರಾಯ ಮೂಡಿದ್ದು.

ರಾಮನನ್ನು ರಾಘವ ಎಂದು ಕರೆದುದರಲ್ಲಿ ವಿಶೇಷತೆಯೆಂದರೆ ಸಾಮಾನ್ಯವಾಗಿ ಸಮಪ್ರಾಯದ ನಾಲ್ವರು ಮಕ್ಕಳಲ್ಲಿ ರಘುವಂಶದ ಪ್ರತೀಕವಾಗಬಲ್ಲವನು ರಾಮನೇ ಎಂಬ ನಿರ್ಣಯಕ್ಕೆ ಬಂದುದನ್ನು ಕಾಣುತ್ತೇವೆ. ಆದರೆ ಇಷ್ಟೊಂದು ಆತಂಕಪಡಲು ಕಾರಣವೇನು? ಇದರ ಹಿಂದೆ ವಂಶಾಧಿಕಾರದ ರಾಜಕೀಯವಿದೆ. ಕೈಕೇಯಿಯನ್ನು ವಿವಾಹವಾಗುವ ಮುನ್ನ ಆಕೆಯಲ್ಲಿ ಹುಟ್ಟುವವನಿಗೇ ರಾಜ್ಯಾಧಿಕಾರ ಎಂದು ದಶರಥ ಮಾತುಕೊಟ್ಟಿದ್ದ. ಅದು ರಾಮನ ಪಟ್ಟಾಭಿಷೇಕಕ್ಕೆ ಪ್ರತಿಬಂಧಕ ಆದೀತೆಂಬ ಭಯವೇ ಈ ನಿರ್ಣಯ ಕೊಡಲು ಮಂತ್ರಿ ಮಹಾವೀರನೂ, ಬಹುಧೀರನೂ ಆಗಬೇಕಾದುದು.

ಇಲ್ಲೆಲ್ಲ ಅಭಿಪ್ರಾಯ ಗರ್ಭಿತವಾದ ವಿಶೇಷಣಗಳನ್ನು ಬಳಸುವ ಮೂಲಕ ಪಾರ್ತಿಸುಬ್ಬ ಸಾಹಿತ್ಯಕ್ಕೆ ಶಕ್ತಿ ತುಂಬಿದ್ದಾನೆ. ಹಾಗೆ ನೋಡಿದರೆ ವಿಶೇಷಣಗಳಿಂದ ಇನ್ನೇನೋ ಅಭಿಪ್ರಾಯವನ್ನು ಹೇಳುವುದು ಕಾವ್ಯದ ಒಂದು ಅಲಂಕಾರ. ಅಲಂಕಾರಃ ಪರಿಕರಃ ಸಾಭಿಪ್ರಾಯೇ ವಿಶೇಷಣೇ (ಅಭಿಪ್ರಾಯ ಗರ್ಭಿತ ವಿಶೇಷಣ ಬಂದರೆ ಅದು ಪರಿಕರಾಲಂಕಾರ ಎಂದು ಅಲಂಕಾರ ಸೂತ್ರ) ನಮ್ಮ ಯಕ್ಷಗಾನ ಪ್ರಸಂಗಗಳಲ್ಲಿ

ಉಪಮಾದಿ ಅಲಂಕಾರಗಳಿಲ್ಲವೆಂದಲ್ಲ ಆದರೆ ಪ್ರಧಾನವಾಗಿ ಕಾಣಿಸುವ ಅಲಂಕಾರವೆ ಪರಿಕರಾಲಂಕಾರ.

ಕೈಕೇಯಿ ಸಹಜವಾಗಿ (ನೈಸರ್ಗಿಕಾಗಿ) ತಾಯಿಯಾಗಿರುತ್ತಿದ್ದರೆ ಬಹುಶಃ ಆಕೆಯ ಮಗನೇ ಪಟ್ಟ ಗಳಿಸಬಹುದಿತ್ತು. (ಇತರ ರಾಣಿಯರಿಗೆ ಮಕ್ಕಳಾಗಲಿಲ್ಲ.) ಹಾಗೆ ಆಗಲಿಲ್ಲ. ದಶರಥನ ಪ್ರಯತ್ನದಲ್ಲಿ ಪುತ್ರಕಾಮೇಷ್ಠಿ. ಅಶ್ವಮೇಧ ಯಾಗ ಇತ್ಯಾದಿಗಳಿಂದ ಮೂರು ರಾಣಿಯರಲ್ಲಿ ನಾಲ್ವರು ಮಕ್ಕಳು ಹುಟ್ಟಿದುದು. ಹಾಗಾಗಿ ಕೇಕೈಯಿ ರಾಜನಿಗಿತ್ತ ಮಾತು ತನ್ನಂತೆ ಅನೂರ್ಜಿತಗೊಂಡಿದೆ. ಈ ಮಾತನ್ನು ಮುಂದೆ ಕೈಕೇಯಿ ಜತೆಗಿನ ಮಾತಿನಲ್ಲಿ ದಶರಥ ತರುವುದೂ ಇದೆ. ಈ ಎಲ್ಲ ಸೂಕ್ಷ್ಮತೆ ಪಟ್ಟಾಭಿಷೇಕ ಪ್ರಸಂಗವನ್ನು ತಾಳಮದ್ದಳೆಯ ಮುಖ್ಯ ಪ್ರಸಂಗಗಳಲ್ಲಿ ಒಂದನ್ನಾಗಿ ಮಾಡಿದೆ. ಆ ರೀತಿ ಮಾತುಗಾರಿಕೆಯನ್ನು ಕಳೆದ ತಲೆಮಾರಿನ ಶ್ರೇಷ್ಠ ಅರ್ಥಧಾರಿಗಳು ಬೆಳೆಸಿ ಕೊಟ್ಟಿದ್ದಾರೆ.

**ಇನ್ನು ಮಂಥರೆಯ ಒಂದು ಪದ. ಕೈಕೇಯಿಯಲ್ಲಿ ಹೇಳುವಂಥದು **
**ಬಾಲೆ ಕೇಳ್ ಪೂಮಾಲೆ ಚಾರು । ಶೀಲೆಯಿಂದು ನಿನ್ನ ಕಾಂತ ।**
**ಭೂಲೋಕವ ರಾಮನಿಂಗೆ । ಪಾಲಿಸಬೇಕೆಂದು ಹೀಗೆ ॥**

ತುಂಬ ಅರ್ಥಗರ್ಭಿತವಾದ ಪದ ಇದು. ಬಾಲೆ, ಹೂವಿನ ಅಲಂಕಾರದಲ್ಲಿ ಹೂಮಾಲೆಯೆ ಆಗಿಹೋದವಳೆ, ನೀನು ಸ್ವಭಾವದಿಂದ ಒಳ್ಳೆಯವಳಾದುದು ಹೆಚ್ಚಾಯಿತು, ನಿನಗೆ ನಾಳೆ ಇಲ್ಲಿ ಏನಾಗುತ್ತದೆ ಎಂಬುದು ಗೊತ್ತಿಲ್ಲವಲ್ಲಾ? ಯೌವನ ಇರುವಾಗ ಹೂಮಾಲೆಯನ್ನು ಮುಡಿಗೇರಿಸಿ ಮೆರೆಸುತ್ತಾರೆ. ಒಂದಿಷ್ಟು ಬಾಡಿದರೂ ತೆಗೆದು ಒಗೆದುಬಿಡುತ್ತಾರೆ. ನಿನ್ನ ಗತಿಯೂ ಹಾಗೆಯೆ ಆಯಿತು. ನಾಳೆ 'ನಿನ್ನ ಕಾಂತ' ಸಮಸ್ತ ಭೂಲೋಕದ ಒಡೆತನವನ್ನು ರಾಮನಿಗೆ ಕೊಡುತ್ತಾನೆ. ಇದ ನಿನಗೆ ಗೊತ್ತಾಗಿದಾ? ಕೊಟ್ಟರೆ ಏನಾಗುತ್ತದೆ? ರಾಮ ಧರಣಿಯದಿಪತಿ ಆಗುತ್ತಾನೆ. ಆಗ ನಿನ್ನ ಮಗ ಏನಾಗುತಾನೆ? ರಾಜನ ಚಾಕರಿಯಾಳು ಆಗುತ್ತಾನೆ. ದಶರಥ ನಾಳೆಯಿಂದ ನಿವೃತ್ತ ರಾಜನಾಗುತ್ತಾನೆ. ನಿನ್ನನ್ನು ಯಾರು ಕೇಳುತ್ತಾರೆ? ಹೇಳುವವಳು, ಕೇಳುವವಳು ಯಾರು? ಪಟ್ಟದರಸಿಯಾಗುವ ಸೀತೆ. ಮುಂದೆ ನಿನ್ನ ಗತಿ ಸೇವಕವೃತ್ತಿ, ಅವರ ಪರಿಚಾರಿಕೆಯಾಗಿ ಇರಬಹುದು. ಹೀಗೆ ಆಸ್ಥಾನದ ರಾಜಕೀಯ ತೆರೆದುಕೊಳ್ಳುತ್ತದೆ.

ಮುಂದೆ ಪಟ್ಟಾಭಿಷೇಕದ ಸಮಾರಂಭದ ಸ್ಥಳಕ್ಕೆ ಬಂದ ರಾಮ ನಡೆದುಕೊಳ್ಳುವ ರೀತಿಯ ವರ್ಣನೆಯ ಭಾಮಿನಿ ಷಟ್ಪದಿ ಪಾರ್ತಿಸುಬ್ಬನ ಹೆಚ್ಚುಗಾರಿಕೆಯನ್ನು ಹೇಳುತ್ತದೆ–

**ಜನಕಜನನಿಯರಿಂಗೆ ರಾಘವ**
**ನನುನಯದಿ ಕೈಮುಗಿದು ತನ್ನಯ**
**ಮನೆಯ ದೈವವ ಬೇಡಿ ಗುರು ಹಿರಿಯರಿಗೆ ತಲೆವಾಗಿ**
**ನೆನಸಿ ಪೊಡಮಟ್ಟನು ಸುಮಿತ್ರೆಯ**
**ಜನನಿ ಕೈಕೆಯ ಕಾಣದಿರೆ ಲ**
**ಕ್ಷ್ಮಣನ ಕಾಣುತ ತಂದೆ ದಶರಥರಾಯಗಿಂತೆಂದ.**

ಇದನ್ನು ಓದುಕಾವ್ಯ ಎಂದರೆ ಹೇಗೆ? ರಂಗಾಭಿನಯದ ಅಂಶಗಳು ಎಷ್ಟು ಸಮೃದ್ಧವಾಗಿದೆ ಇಲ್ಲಿ?

ರಾಘವನು ಕೈಮುಗಿದ ಅನುಕ್ರಮಣಿಕೆಯನ್ನು ಗಮನಿಸಿ. ಮೊದಲು ತಂದೆಗೆ ವಂದನೆ. ಅನಂತರ ತಾಯಿ ಕೌಸಲ್ಯೆಗೆ. ಬಳಿಕೆ ನೆನಸಿ ಸುಮಿತ್ರೆಗೆ. ಇದರ ಔಚಿತ್ಯವೇನು? ಕೀರ್ತಿಶೇಷ ಹರಿದಾಸ ರಾಮದಾಸ ಸಾಮಗರು ರಾಮನ ಪಾತ್ರ ವಹಿಸಿ ನೀಡಿದ ವಿವರಣೆಯನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ.

ಮೇಲಿನ ವಂದನೆಯ ಅನುಕ್ರಮಣಿಕೆ ಸ್ಮೃತಿಯ ನಿಗದನಕ್ಕೆ ಸರಿಯಾಗಿ ಇಲ್ಲ. ಪಿತುಃ ಶತಗುಣಂ ಮಾತಾ ಗೌರವೇಣಾತಿರಿಚ್ಯತೇ (ತಂದೆಗೆ ನೂರ್ಮಡಿಯಾಗಿ ತಾಯಿ ಗೌರವಕ್ಕೆ ಅರ್ಹಳು) ಎನ್ನುತ್ತದೆ ಸ್ಮೃತಿ. ಆದರೆ ಉಪನೀತನಾದವನಿಗೆ ಅಂದರೆ ಆ ಸಂಸ್ಕಾರದ ಮೂಲಕ ಎರಡನೆ ಜನ್ಮ ಪಡೆದವನಿಗೆ ತಾಯಿಯೂ ತಂದೆಯೂ ತಂದೆಯೇ ಆಗುತ್ತಾನೆ. ಅದನ್ನು ತಿಳಿದಿರುವವರೇ ಆಗಿರುವ ತಾಯಂದಿರ ಮುಂದೆ ಮೊದಲಾಗಿ ಜನಕನ ಪದಗಳಿಗೆರಗಬೇಕಾಗಿದೆ– ಹೀಗೆ ಸಾಮಗರ ಅರ್ಥ. ನನಗೆ ವಿಚಿತ್ರವಾಗಿ ಕಂಡಿತು. ಪಕ್ಕದಲ್ಲಿ ಇದ್ದ ಅರ್ಥಧಾರಿ ಅಂಬಾತನಯರಲ್ಲಿ ಕೇಳಿದೆ. ಅದು ಸರಿ ಎಂದರು. ಆ ಸಾಂಸ್ಕೃತಿಕ ಅಂಶದ ಪರಿಚಯ ಇರುವವರಿಗೆ ಮಾತ್ರ ಪಾರ್ತಿಸುಬ್ಬನ ಇಂಗಿತ ಹೊಳೆಯುತ್ತದೆ.

ಮುಂದೆ ಜನನಿ ಕೈಕೇಯಿ ಕಾಣದಿದ್ದಾಗ ಲಕ್ಷ್ಮಣನ ಕಾಣುತ (ಇದೇನು? ನೀನೇಕೆ ಗಮನಿಸಲಿಲ್ಲ? ಎಂಬ ಇಂಗಿತ.) ತಂದೆ ದಶರಥ ರಾಯನಲ್ಲಿ ರಾಮ ಹೇಳುತ್ತಾನೆ–

**ಜನಕ ಕಿರು ಜನನಿಯಹ । ವನಜಮುಖಿ ಕೈಕೆ ಈ ।**
**ಜನರ ಸಭಯೊಳಗೆಲ್ಲಿ । ಕಾಣೆ ನಾನವಳ ।**
**ಏಕೆ ಭರತನ ಮಾತೆ । ಈ ಕಡೆಗೆ ಬರಲಿಲ್ಲ ।**
**ನೀ ಕರೆದು ತಾರನುಜ । ಲಕ್ಷ್ಮಣನೆ ವೀರ ॥**

ಇಲ್ಲಿ ಎಲ್ಲ ರಾಯಲ್ ಪಾಲಿಟಿಕ್ಸ್ ಕಾಣಿಸತಗೊಡಗುತ್ತದೆ. ಕೈಕೆ ಕಾಣಿಸುತ್ತಿಲ್ಲವಲ್ಲ? ಏಕೆ ಭರತನ ಮಾತೆ ಈ ಕಡೆಗೆ ಬರಲಿಲ್ಲ? ಈ ಪ್ರಶ್ನೆಯಲ್ಲಿ ರಾಮನ ಒಳ ತುಮುಲ ಸ್ಪಷ್ಟವಾಗಿ ವ್ಯಂಜಿತವಾಗುತ್ತದೆ. ಏನೋ ಪ್ರತಿಕೂಲತೆಯ ಸಂದೇಹ ಕಾಣಿಸಿಕೊಂಡಿದೆ. ಆಕೆ ವನಜಮುಖಿಯಾಗಿಯೇ ಪಾವಿತ್ರ್ಯಕ್ಕೆ ಸಂಕೇತವಾಗಿಯೆ ರಾಮನ ಪಾಲಿಗೆ ಉಳಿದವಳು. ಆದರೂ ಆಕೆಯನ್ನು ಕಂಡು ವಂದಿಸಿ ಆಶೀರ್ವಾದ ಪಡೆಯದೆ ಸಿಂಹಾಸನವನ್ನು ತಾನು ಏರುವಂತಿಲ್ಲ ಎಂಬ ಇಂಗಿತ ನೀಡುತ್ತಾನೆ. ಮಾತ್ರವಲ್ಲ ಅವಳನ್ನು ಕರೆತರಲು ಲಕ್ಷ್ಮಣನೊಡನೆ ಹೇಳುತ್ತಾನೆ. ಹಾಗೆ ಹೇಳುವಾಗ ವೀರ ಎಂಬ ವಿಶೇಷಣ ನೀಡುತ್ತಾನೆ. ಲಕ್ಷ್ಮಣನಿಗೆ ಒಂದು ಕೆಲಸ ವಹಿಸಿಕೊಟ್ಟರೆ ಅದು ಆಗದೆ ತಿರುಗಿಬರುವವನಲ್ಲ. ಅಲ್ಲದೆ ಕೈಕೇಯ ಅಂತಃಪುರಕ್ಕೆ ಹಾಗೆಲ್ಲ ಅಪ್ಪಣೆಯಿಲ್ಲದೆ ಪ್ರವೇಶಿಸುವುದೂ ಇತರರಿಗೆ ಕಷ್ಟವೆ. ಅಲ್ಲೊಂದು ವೀರತ್ವದ ಅವಶ್ಯಕತೆ ಇದೆ. ಅದನ್ನು ಮಾಡಬಲ್ಲ ಯೋಗ್ಯತೆ ಲಕ್ಷ್ಮಣನಲ್ಲಿದೆ. (ಇಲ್ಲಿ ಪದದ ಭಾವ ವ್ಯಂಜಿತವಾಗಿ ಹಾಡುವುದು ಹೇಗೆಂಬ ಪ್ರಾತ್ಯಕ್ಷಿಕೆಯನ್ನೂ ನೀಡಿದೆ.)

ಕೈಕೆ ಲಕ್ಷ್ಮಣನಲ್ಲಿ ಹೇಳುವಾಗ ಮಹಾವೀರ ಎಂಬ ವಿಶೇಷಣ ಹಚ್ಚುತ್ತಾಳೆ. ನೀನು ವೀರ ಮಾತ್ರ ಅಲ್ಲ ಮಹಾವೀರನೆ ಆದರೂ ನಿನ್ನ ಮಾತಿಗೆಲ್ಲ ಬರುವವಳಲ್ಲ. ನನ್ನ ಕಾಂತನಾದ ಪೊಡವಿಪಾಲಕನನ್ನು ಇಲ್ಲಿ ಬರಲು ಹೇಳಯ್ಯ ಎನ್ನುತ್ತಾಳೆ. ಲಕ್ಷ್ಮಣ ಬಂದು ಕೈಕೇಯ ಮಾತನ್ನು ತಿಳಿಸಿದಾಗ ತತ್‌ಕ್ಷಣ ದಶರಥ ಕೈಕೇಯ ಅಂತಃಪುರಕ್ಕೆ ಧಾವಿಸಿಬರುತ್ತಾನೆ. ಇಲ್ಲಿನ ರಭಸ ಕಂಡರೂ ಇದು ರಂಗಕೃತಿ ಎಂದು ಅರ್ಥವಾಗುತ್ತದೆ. ಆಟದಲ್ಲೂ ದಶರಥ ಥಟ್ಟನೆ ನೇಪಥ್ಯಕ್ಕೆ ಧಾವಿಸಿ ಕೈಕೇಯಿಯ ಬಳಿಗೆ ಬರುತ್ತಾನೆ. ಅವಳಿರುವುದು ಶೋಕಾಗಾರದಲ್ಲಿ ಆಗಿರುವುದರಿಂದ ಅವಳು ದುಃಖದಲ್ಲಿದ್ದಾಳೆ ಎಂದು ಹೇಳಬೇಕಾಗಿಲ್ಲ. ಅವಳ ರೀತಿ ಕಂಡು ಕಳವಳಿಸಿ ದಶರಥ ಕೇಳುತ್ತಾನೆ 

**ಏನಾಯಿತಂಬುಜನೇತ್ರೆ । ಮಾನಿನಿಯರ ಮೌಳೇ ॥**
**ನೀನೇಕೆ ಚಿಂತಿಸುತಿಪ್ಪೆ । ಪೇಳಬೇಕೀಗೆನಗೆ ॥೧॥**
**ಆನನವೇಕೆ ಬಾಡಿತು । ಅಂಬುಜದಳಾಕ್ಷಿ ॥**
**ಈ ನಿರೋಧಗಳೇಕೆ । ಕೋಮಲಾಂಗಿ ಪೇಳೇ ॥**

ಎಂದಿಗೂ ಕೈಕೇಯಿಯ ಮೊಗವನ್ನು ಈ ತೆರನಾಗಿ ಕಂಡವನಲ್ಲ ದರಥ. ಅವಳ ದುಃಖದ ಕಾರಣವನ್ನು ನಯವಾಗಿ ವಿಚಾರಿಸುತ್ತಾನೆ. ಅಂಬುಜನೇತ್ರೆ, ಮಾನಿನಿಯರ ಮೌಳೇ ಎಂಬ ಸಂಬೋಧನೆಗಳಿಗೆ, ಶಬ್ದಾರ್ಥಗಳಿಗೆ ಭಿನ್ನವಾದ, ವ್ಯಂಜಿತ ಅರ್ಥಗಳಿಗೆ. ಕೋಮಲಾಂಗಿಯಾದ ನಿನ್ನಲ್ಲಿ ಇವತ್ತು ಈ ಬಗೆ ಕಾಠಿಣ್ಯ ಹೇಗೆ ಕಾಣಿಸಿತು ಎಂಬುದು ದಶರಥನಿಗಾದ ಕಳವಳ. ಆಗ ಕೈಕೇಯಿ ತನ್ನ ತಂದೆಗೆ ಕೊಟ್ಟ ಮಾತಿನ ಪ್ರಸ್ತಾವ

ಮಾಡುವುದಿಲ್ಲ. ಅವಳ ಕ್ಲೇಶಕ್ಕೆ ಕಾರಣ ಹೇಳುವ ಬಗೆ ವಿಶಿಷ್ಟ. ವಲ್ಲಭ, ಕಲ್ಯಾಣಾಂಗ ಎಂಬ ವಿಶೇಷಣಗಳೊಂದಿಗೆ ತನ್ನನ್ನು ಹೇಗೆ ನೀನು ನಡೆಸಬೇಕಾದವನು ಎಂಬ ಸೂಚನೆಯನ್ನು ಕೊಡುತ್ತಾಳೆ. ಆ ಬಳಿಕ ಹೇಳುತ್ತಾಳೆ, ಹಿಂದೆ ನನಗೆ ಕೊಟ್ಟ ಎರಡು ವರ (ಭಾಷೆ ಮಾತು) ಪಡೆಯದೆ ಬಾಕಿ ಇದೆ. ಸಂದೇಹ ಮಾಡದೆ, ಸಂತೋಷದಿಂದ ಈಗಲೇ ನಾನು ಕೇಳುವ ಆ ವರಗಳನ್ನು ಕೊಡಬೇಕು ಎನ್ನುತ್ತಾಳೆ.

ದಶರಥನಿಗೆ ಅರ್ಥವಿಜ್ಞಾನದ ಬಗೆ ಗೊತ್ತಿಲ್ಲವೆ? ಅವನು ಹತ್ತು ದಿಕ್ಕುಗಳಿಗೂ ರಥ ಓಡಿಸಬಲ್ಲವನಲ್ಲವೆ? ಅವನೂ ಅಷ್ಟೇ ವ್ಯಂಜಿತವಾಗಿ ಹೇಳುತ್ತಾನೆ. ಇಷ್ಟೊಂದು (ಕ್ಷುಲ್ಲಕ) ಮಾತಿಗೆ ಇಂಥದ್ದೊಂದು ಸಿಟ್ಟೇ? ಅಂತರಂಗ ಶುದ್ಧವಾಗಿ ಕೇಳು, ನಾ ಕೊಟ್ಟೆ ಎನ್ನುತ್ತಾನೆ. ಅಂತರಂಗ ಶುದ್ಧವಾದರೆ ಅಮಂಗಲವಾದ ಕೇಳಿಕೆ ವರಗಳ ಹೆಸರಿನಲ್ಲಿ ಬರಬಾರದು ಎಂದು ಅವನ ಇಂಗಿತ. ಇಂಥ ಎಷ್ಟೊ ವ್ಯಂಜಿತ ಅರ್ಥಗಳು ಸರಳವಾಗಿ ಕಾಣುವ ಪಾರ್ತಿಸುಬ್ಬನ ಪ್ರಯೋಗದ ಶಬ್ದಗಳಲ್ಲಿ ಕಾಣುತ್ತೇವೆ.

ಇದೇ ಗುಣಮಟ್ಟದ ಹತ್ತಕ್ಕೂ ಹೆಚ್ಚು ಪ್ರಸಂಗಗಳನ್ನೂ ಆಟ ಆಡುವುದಕ್ಕೆ ಬೇಕಾದ ಕ್ರಮದೀಪಿಕೆಯಂಥ ಸಭಾಲಕ್ಷಣ ಗ್ರಂಥವನ್ನೂ ಕನ್ನಡಕ್ಕೆ ಕಾಣಿಕೆ ಕೊಟ್ಟಿರುವ ಪಾರ್ತಿಸುಬ್ಬನಿಗೆ ಡಾ. ಧನಂಜಯ ಕುಂಬ್ಳೆ ಅವರೆಂದಂತೆ ಮಹಾಕವಿ ಪಟ್ಟವನ್ನು ಧಾರಾಳ ಕೊಡಬಹುದು. ನನ್ನನ್ನು ಇಲ್ಲಿಗೆ ಕರೆಸಿ ಮಾತನ್ನು ಆಡಿಸಿದ ಎಲ್ಲರಿಗೆ, ಆಲಿಸಿದ ನಿಮಗೆಲ್ಲರಿಗೆ ಕೃತಜ್ಞ, ವಂದನೆಗಳು.

* * *

  

ಕರ್ನಾಟಕ ಯಕ್ಷಗಾನ ಅಕಾಡೆಮಿ ಬೆಂಗಳೂರು
ಕನ್ನಡ ವಿಭಾಗ, ಭಾಷಾ ಅಧ್ಯಯನ ಕೇಂದ್ರ,
ಕಣ್ಣೂರು ವಿಶ್ವವಿದ್ಯಾಲಯ, ಕಾಸರಗೋಡು
ಯಕ್ಷಗಾನ ಸಂಶೋಧನ ಕೇಂದ್ರ, ಸರಕಾರಿ ಕಾಲೇಜು, ಕಾಸರಗೋಡು

ಇವರ ಸಹಯೋಗದೊಂದಿಗೆ

## ಪಾರ್ತಿಸುಬ್ಬ–ಬದುಕು ಬರಹ ದ್ವಿದಿನ ವಿಚಾರ ಸಂಕಿರಣ

ದಿನಾಂಕ : 2020, ಫೆಬ್ರವರಿ, 13 ಮತ್ತು 14, ಗುರುವಾರ ಮತ್ತು ಶುಕ್ರವಾರ, ಬೆಳಿಗ್ಗೆ:10.00 ಗಂಟೆಗೆ
ಸ್ಥಳ: ಕಣ್ಣೂರು ವಿಶ್ವವಿದ್ಯಾಲಯದ ಚಾಲಾ ವಿ.ವಿ. ಆವರಣ,
ವಿದ್ಯಾನಗರ–671123, ಕಾಸರಗೋಡು.

ಯಕ್ಷಗಾನ ಕಾರ್ಯಕ್ರಮ : 2020, ಫೆಬ್ರವರಿ, 13 ಮತ್ತು 14 ರಂದು ಪ್ರತಿದಿನ ಸಂಜೆ:6.00
ಸ್ಥಳ: ಮೀಯಪದವು ಶ್ರೀ ವಿದ್ಯಾವರ್ಧಕ ಹೈಯರ್ ಸೆಕೆಂಡರಿ ಶಾಲೆಯ
"ನಾರಾಯಣೀಯಂ" ರಂಗವೇದಿಕೆ.

### ತಮಗೆ ಆದರದ ಸ್ವಾಗತ

ಡಾ.ರಾಜೇಶ್ ಬೆಜ್ಜಂಗಳ
ನಿರ್ದೇಶಕರು, ಕನ್ನಡ ವಿಭಾಗ,
ಭಾರತಿಯ ಭಾಷಾ ಅಧ್ಯಯನಾಂಗ
ಕಣ್ಣೂರು ವಿಶ್ವವಿದ್ಯಾಲಯ, ಕಾಸರಗೋಡು

ಶ್ರೀ ಯೋಗೀಶ್ ರಾವ್ ಚಿಗುರುಪಾದೆ
ಸದಸ್ಯ ಸಂಚಾಲಕರು
ಕರ್ನಾಟಕ ಯಕ್ಷಗಾನ ಅಕಾಡೆಮಿ,
ಬೆಂಗಳೂರು

ಎಸ್.ಹೆಚ್.ಶಿವರುದ್ರಪ್ಪ
ರಿಜಿಸ್ಟ್ರಾರ್
ಕರ್ನಾಟಕ ಯಕ್ಷಗಾನ ಅಕಾಡೆಮಿ
ಬೆಂಗಳೂರು

ಸರ್ವ ಸದಸ್ಯರು
ಕರ್ನಾಟಕ ಯಕ್ಷಗಾನ ಅಕಾಡೆಮಿ
ಬೆಂಗಳೂರು

ಡಾ.ರತ್ನಾಕರ ಮಲ್ಲಮೂಲೆ
ಸಂಯೋಜನಾಧಿಕಾರಿ
ಯಕ್ಷಗಾನ ಸಂಶೋಧನಾ ಕೇಂದ್ರ
ಸರಕಾರಿ ಕಾಲೇಜು, ಕಾಸರಗೋಡು

## ಪಾರ್ತಿಸುಬ್ಬ–ಬದುಕು ಬರಹ ದ್ವಿದಿನ ವಿಚಾರ ಸಂಕಿರಣ

ದಿ:13.02.2020, ಬೆಳಿಗ್ಗೆ:10.00 ಗಂಟೆಗೆ, ಗುರುವಾರ,

ಉದ್ಘಾಟನೆ
ಡಾ. ವಿ.ಪಿ.ಪಿ. ಮುಸ್ತಾಫ
ಸಿಂಡಿಕೇಟ್ ಸದಸ್ಯರು, ಕಣ್ಣೂರು ವಿಶ್ವವಿದ್ಯಾಲಯ

ಅಧ್ಯಕ್ಷತೆ
ಪ್ರೊ. ಎಂ.ಎ. ಹೆಗಡೆ
ಅಧ್ಯಕ್ಷರು, ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು

ದಿಕ್ಸೂಚಿ ಭಾಷಣ
ಡಾ. ಪ್ರಭಾಕರ ಜೋಷಿ
ಯಕ್ಷಗಾನ ಹಿರಿಯ ವಿದ್ವಾಂಸರು, ಮಂಗಳೂರು

ಮುಖ್ಯ ಅತಿಥಿಗಳು
ಡಾ. ಕೆ. ಚಿನ್ನಪ್ಪ ಗೌಡ
ವಿಶ್ರಾಂತ ಕುಲಪತಿಗಳು, ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ
ಡಾ. ಎ.ಎಲ್. ಅನಂತ ಪದ್ಮನಾಭ
ಪ್ರಾಂಶುಪಾಲರು, ಸರಕಾರಿ ಕಾಲೇಜು, ಕಾಸರಗೋಡು
ಶ್ರೀ ಕಾಸರಗೋಡು ಚಿನ್ನ
ರಂಗಕಲಾವಿದರು ಹಾಗೂ ಮಾಜಿ ಅಧ್ಯಕ್ಷರು, ಕರ್ನಾಟಕ ಕೊಂಕಣಿ ಅಕಾಡೆಮಿ
ಶ್ರೀ ಜಯರಾಮ ಎಡನೀರು
ಮಾಜಿ ಅಧ್ಯಕ್ಷರು, ಪಾರ್ತಿಸುಬ್ಬ ಯಕ್ಷಗಾನ ಕಲಾಕ್ಷೇತ್ರ, ಕೇರಳ, ಕಾಸರಗೋಡು

### ವಿಚಾರ ಗೋಷ್ಠಿಗಳು

ಗೋಷ್ಠಿ–1 ಬೆಳಿಗ್ಗೆ: 11.00 ಗಂಟೆಗೆ

ಅಧ್ಯಕ್ಷತೆ
ಡಾ. ಚಂದ್ರಶೇಖರ್ ದಾಮ್ಲೆ
ಯಕ್ಷಗಾನ ಹಿರಿಯ ವಿದ್ವಾಂಸರು, ಸುಳ್ಯ

ವಿಷಯ–1 ಪಾರ್ತಿಸುಬ್ಬನ ಕಾಲ ಹಾಗೂ ಕರ್ತೃತ್ವ ಚರ್ಚೆಗಳು – ಡಾ.ಪಾದೆಕಲ್ಲು ವಿಷ್ಣು ಭಟ್
ಯಕ್ಷಗಾನ ಹಿರಿಯ ವಿದ್ವಾಂಸರು
ಉಡುಪಿ

ವಿಷಯ–2 ಪಾರ್ತಿಸುಬ್ಬನ ಬಗೆಗಿನ ಅಧ್ಯಯನಗಳು ಹಾಗೂ ಕೃತಿ ಪ್ರಕಟಣೆಗಳು – ಶ್ರೀ ಗಣರಾಜ ಕುಂಬ್ಳೆ
ಕನ್ನಡ ಉಪನ್ಯಾಸಕರು
ಸ.ಪ.ಪೂ.ಕಾಲೇಜು,ರಾಮಪುಂಜ

ಊಟದ ವಿರಾಮ 02.00–03.00

ಗೋಷ್ಠಿ–2 ಮಧ್ಯಾಹ್ನ:03.00 ಗಂಟೆಗೆ

ಅಧ್ಯಕ್ಷತೆ
ಡಾ. ಯು.ಶಂಕರನಾರಾಯಣ ಭಟ್
ಯಕ್ಷಗಾನ ಹಿರಿಯ ವಿದ್ವಾಂಸರು, ಕಾಸರಗೋಡು

ವಿಷಯ–1 ಪಾರ್ತಿಸುಬ್ಬನ ಪದ ಪ್ರಯೋಗ ವೈಶಿಷ್ಟ್ಯಗಳು – ಶ್ರೀ ವಾಸುದೇವ ರಂಗ ಭಟ್
ಯಕ್ಷಗಾನ ಕಲಾವಿದರು

ವಿಷಯ–2 ಪಾರ್ತಿಸುಬ್ಬನ ಇತಿಹಾಸ ಹಾಗೂ ಐತಿಹ್ಯಗಳು – ಶ್ರೀ ಎಂ.ನಾ. ಚಂಬಲ್ತಿಮಾರ್
ಸಂಪಾದಕರು
ಕಣಿಪುರ ಯಕ್ಷಗಾನ ಮಾಸಪತ್ರಿಕೆ

### ಯಕ್ಷಗಾನ ಪ್ರದರ್ಶನಗಳು

ದಿ:14.02.2020, ಶುಕ್ರವಾರ

ಗೋಷ್ಠಿ–3 ಬೆಳಿಗ್ಗೆ: 10.00 ಗಂಟೆಗೆ

ಅಧ್ಯಕ್ಷತೆ
ಡಾ. ಕೆ. ಕಮಲಾಕ್ಷ
ವಿಶ್ರಾಂತ ಪ್ರಾಧ್ಯಾಪಕರು ಸರ್ಕಾರಿ ಕಾಲೇಜು, ಕಾಸರಗೋಡು

ವಿಷಯ–1 ಪಾರ್ತಿಸುಬ್ಬನ ಕೃತಿ ಪರಿಚಯ – ಡಾ. ಆನಂದರಾಮ ಉಪಾಧ್ಯ
ಯಕ್ಷಗಾನ ಹಿರಿಯ ವಿದ್ವಾಂಸರು,
ಬೆಂಗಳೂರು

ವಿಷಯ–2 ಪಾರ್ತಿಸುಬ್ಬನ ಮಟ್ಟುಗಳು ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆ – ಶ್ರೀ ಶ್ರೀಧರ್ ಡಿ.ಎಸ್.
ಯಕ್ಷಗಾನ ಹಿರಿಯ ವಿದ್ವಾಂಸರು
ಹಾಗೂ ಕಲಾವಿದರು

ದಾಖಲೀಕರಣ ಪ್ರಸ್ತುತಿ: ಸಿರಿಬಾಗಿಲು ರಾಮಕೃಷ್ಣ ಮಯ್ಯ, ಬಲಿಪ ಶಿವಶಂಕರ ಭಟ್ ಹಾಗೂ ಬಳಗ

ಊಟದ ವಿರಾಮ 01.00–02.00

ಗೋಷ್ಠಿ–4 ಮಧ್ಯಾಹ್ನ: 2.00 ಗಂಟೆಗೆ

ಅಧ್ಯಕ್ಷತೆ
ಡಾ. ರಾಘವ ನಂಬಿಯಾರ್
ಯಕ್ಷಗಾನ ಹಿರಿಯ ವಿದ್ವಾಂಸರು ಹಾಗೂ ಕಲಾವಿದರು

ವಿಷಯ–1 ಪಾರ್ತಿಸುಬ್ಬನ ರಾಮಾಯಣ ಪ್ರಸಂಗಗಳು – ಡಾ. ಧನಂಜಯ ಕುಂಬ್ಳೆ
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ
ಮಂಗಳೂರು ವಿಶ್ವವಿದ್ಯಾಲಯ

ಮಧ್ಯಾಹ್ನ:03.00 ಗಂಟೆಗೆ

### ಸಮಾರೋಪ ಸಮಾರಂಭ

ಸಮಾರೋಪ ಭಾಷಣ
ಪ್ರೊ. ಎಂ.ಎಲ್. ಸಾಮಗ
ಯಕ್ಷಗಾನ ಹಿರಿಯ ವಿದ್ವಾಂಸರು, ಉಡುಪಿ

ಅಧ್ಯಕ್ಷತೆ
ಪ್ರೊ. ಎಂ.ಎ. ಹೆಗಡೆ
ಅಧ್ಯಕ್ಷರು, ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು

ಮುಖ್ಯ ಅತಿಥಿಗಳು
ಶ್ರೀ ಉಮೇಶ್ ಸಾಲ್ಯಾನ್
ಅಧ್ಯಕ್ಷರು, ಕೇರಳ ತುಳು ಅಕಾಡೆಮಿ
ಡಾ. ರಮಾನಂದ ಬನಾರಿ
ಯಕ್ಷಗಾನ ತಾಳ ಮದ್ದಲೆ ಹಿರಿಯ ಅರ್ಥದಾರಿಗಳು, ಮಂಜೇಶ್ವರ
ಶ್ರೀಮತಿ ಸುಜಾತ ಎಸ್.
ವಿಭಾಗ ಮುಖ್ಯಸ್ಥರು, ಕನ್ನಡ ಸರಕಾರಿ ಕಾಲೇಜು, ಕಾಸರಗೋಡು
ಶ್ರೀ ಸಂಕಬೈಲ್ ಸತೀಶ್ ಅಡಪ
ಕಾರ್ಯದರ್ಶಿ, ಪಾರ್ತಿಸುಬ್ಬ ಯಕ್ಷಗಾನ ಕಲಾಕ್ಷೇತ್ರ, ಕೇರಳ

ಸ್ಥಳ: "ನಾರಾಯಣೀಯಂ" ರಂಗವೇದಿಕೆ,
ಶ್ರೀ ವಿದ್ಯಾವರ್ಧಕ ಹೈಯರ್ ಸೆಕೆಂಡರಿ ಶಾಲೆ ಮೀಯಪದವು

ದಿನಾಂಕ : 13.02.2020 ಗುರುವಾರ ಸಂಜೆ : 06.00 ಗಂಟೆಗೆ
ಯಕ್ಷಗಾನ ತಾಳಮದ್ದಲೆ ಪ್ರಸಂಗ ಪಾರ್ತಿಸುಬ್ಬ ವಿರಚಿತ "ವಾಲಿಮೋಕ್ಷ"
ಸಾದರಪಡಿಸುವವರು ಶ್ರೀ ನಾಗರಾಜ ಪದಕಣ್ಣಾಯ ಮತ್ತು ಬಳಗ

ಹಿಮ್ಮೇಳ : ಭಾಗವತರು – ಶ್ರೀ ದೇವಿಪ್ರಸಾದ ಆಳ್ವ ತಲಪಾಡಿ
ಚೆಂಡೆ – ರೋಹಿತ್ ಉಚ್ಚಿಲ, ಮದ್ದಳೆ – ಭಾಸ್ಕರ ಕೋಳ್ಯೂರು
ಅರ್ಥದಾರಿಗಳು: ಡಾ.ಎಂ.ಪ್ರಭಾಕರ ಜೋಷಿ, ರಾಧಾಕೃಷ್ಣ ಕಲ್ಚಾರ್,
ಸದಾಶಿವ ಆಳ್ವ ತಲಪಾಡಿ, ನಾಗರಾಜ ಪದಕಣ್ಣಾಯ

ದಿನಾಂಕ:14.02.2020 ಶುಕ್ರವಾರ ಸಂಜೆ:06.00 ಗಂಟೆಗೆ
ಯಕ್ಷಗಾನ ಬಯಲಾಟ ಪ್ರಸಂಗ ಪಾರ್ತಿಸುಬ್ಬ ವಿರಚಿತ "ಪಂಚವಟಿ"
ಸಾದರಪಡಿಸುವವರು ವಿಠಲ್‌ಭಟ್ ಮತ್ತು ಬಳಗ, ಕೋಳೂರು ಮೀಯಪದವು

ಹಿಮ್ಮೇಳ : ಭಾಗವತರು: ಶ್ರೀ ಸಿರಿಬಾಗಿಲು ರಾಮಕೃಷ್ಣಮಯ್ಯ,
ಚೆಂಡೆ: ಮುರಾರಿ ಕಡಂಬಳಿತ್ತಾಯ, ಮದ್ದಳೆ: ಲವ ಆಚಾರ್ಯ ಐಲ
ಪಾತ್ರವರ್ಗ : ಶ್ರೀರಾಮ: ತಾರಾನಾಥ ಬಲ್ಯಾಯ ವರ್ಕಾಡಿ
ಲಕ್ಷ್ಮಣ: ಗುಂಡಿಮಜಲು ಗೋಪಾಲ ಭಟ್ । ಸೀತೆ: ಕಿರಣ್ ಕುದ್ರೆ ಕೋಡ್ಲು
ಶೂರ್ಪನಖಿ: ಉಬರಡ್ಕ ಉಮೇಶ ಶೆಟ್ಟಿ
ಮಾಯಾ ಶೂರ್ಪನಖಿ: ಕು.ಆಜ್ಞಾ ಸೋಹಂ
ಋಷಿಗಳು: ದೇವಕಾನ ಶ್ರೀಕೃಷ್ಣ ಭಟ್, ಸತೀಶ ಅಡಪ ಸಂಕಬೈಲು.

